# ಗೀತ ನಾಟಕಗಳು

ಒಂಬತ್ತು ವಿವಿಧ
ಗೀತ ನಾಟಕಗಳ ಸಂಗ್ರಹ

ಶಿವರಾಮ ಕಾರಂತ

ಹರ್ಷ ಮುದ್ರಣ, ಪ್ರಕಟಣಾಲಯ ಪುತ್ತೂರು, ದ. ಕ.

ರೂ. ೨/೪

*

# ಪ್ರಸ್ತಾವನೆ

ಹಲವು ವರ್ಷಗಳಿಂದ ನಾನು ಮಾಡುತ್ತ ಬಂದಿರುವ ಕೆಲವೊಂದು ಪ್ರಯೋಗಗಳ ಫಲವೇ—ಈ ಗೀತ ನಾಟಕಗಳು. ಮನುಷ್ಯನ ಭಾವನೆಗಳು ಒಂದೊಂದು ವಿಧದಿಂದ ಪ್ರಕಟವಾಗುವುವು. ವ್ಯಕ್ತಿಯ ವಿಚಾರಲಹರಿ, ಭಾವನಾಲಹರಿಗಳು ಎಷ್ಟು ಭಿನ್ನವೋ ಅಷ್ಟೇ ಭಿನ್ನರೂಪಗಳಲ್ಲಿ ಅವು ಪ್ರಕಟವಾಗುವುದು ಸಹಜ. ನಾಟಕ, ನೃತ್ಯ, ಚಿತ್ರ, ಶಿಲ್ಪ, ಗೀತ—ಇವೆಲ್ಲ ಮಾನವನ ಭಾವನಾಲಹರಿಗಳಿಗೆ ಮೈಗೊಡುವ ಸಾಧನಗಳು. ಬರಿಯ ಸಾಹಿತ್ಯವೊಂದೇ ಆ ಕೆಲಸ ಮಾಡಬಹುದು. ಆದರೆ ಒಂದೊಂದು ಸಾಧನ ಒಂದೊಂದು ಬಗೆಯ—ಭಾವನೆಗೋ ವಿಚಾರಕ್ಕೋ ಅತೀವ ಸುಂದರವಾದೀತು. ನನ್ನ ಕೆಲವೊಂದು ಭಾವನೆ, ವಿಚಾರಗಳಿಗೆ ನಾನು 'ನಾಟಕ'ವನ್ನು ಸಾಧನವಾಗಿ ಆರಿಸಿಕೊಂಡೆ. ಆದರೆ ನಾಟಕದ ಮೈಕಟ್ಟು ಒಂದೇ ತೆರನಾಗಿರಬೇಕೆಂಬ ನಿಯಮವೆಲ್ಲಿ? ಸಾಮಾನ್ಯ ನಾಟಕಗಳು—ಕೇವಲ ಸಾಹಿತ್ಯಾತ್ಮಕವಾದುವು. ಅವನ್ನು ನಮ್ಮ ಪೂರ್ವಿಕರು ಶ್ರಾವ್ಯಕಾವ್ಯ, ದೃಶ್ಯಕಾವ್ಯವಾಗಿ ವಿಭಾಗಿಸಿದ್ದಾರೆ. ನಾಟಕದ ಉದ್ದೇಶ ಕೇವಲ—ಶ್ರವಣವಾದರೆ, ಆ ಕೆಲಸವನ್ನು ಅದಕ್ಕಿಂತ ಸಹಜ, ಸುಂದರವಾಗಿ ಕಾದಂಬರಿ ಮಾಡಲಾರದೇ? ಅದು 'ನಾಟಕ'ವೆಂಬ ಹೆಸರಿಗೆ ತಕ್ಕುದಾಗಲು ಚಿತ್ರಣ ರೀತಿಯು—ಚಿತ್ರಿತ ವಿಷಯಗಳು ಕಣ್ಮುಂದೆ ನಲಿದು, ನಟಿಸಿ, ಮಾತನಾಡುವಂತೆ ಕಂಡರೇನೆ ಸೊಗಸು.

ನಾಟಕ— ದೃಶ್ಯಪ್ರಯೋಗಕ್ಕೆ ಅನುಕೂಲವಾಗಿರಬೇಕೆಂಬುವೇ ನನ್ನ ಮತ. ಅಂದೊಡನೆ, ಅದು ಕೇವಲ ವಾಸ್ತವಿಕವಾಗಿ ಚಿತ್ರಿತವಾಗಬೇಕು—ಎಂದು ನನಗೆ ಅನಿಸುವುದಿಲ್ಲ. ಕಾರಣವಿಷ್ಟೆ: ಯಾವ ಕಲಾ ಸೃಷ್ಟಿಯೂ ನಾವು ಸ್ಥೂಲ ದೃಷ್ಟಿಯಿಂದ ತಿಳಿಯುವಷ್ಟೇ ವಾಸ್ತವಿಕವಾಗಿರುವುದಿಲ್ಲ. ಕಲಾವಿದ—ಜೀವನವನ್ನು ಅನುಭವಿಸಿ, ಅದರಿಂದ ತಾನು ಗಳಿಸಿದ ಅನುಭವ, ಅನುಭಾವಗಳನ್ನು ಚಿತ್ರಿಸುವ ವೇಳೆಗೆ—ಯಾಂತ್ರಿಕವಾಗಿ ಆ ಚಿತ್ರಗಳು ಮೂಡುವುದಿಲ್ಲ. ಆತ ಸನ್ನಿವೇಶಗಳನ್ನೂ, ಪಾತ್ರಗಳನ್ನೂ ಜೀವನದಿಂದ ಆರಿಸಿಕೊಂಡು, ತನ್ನ ಉದ್ದೇಶ ಸಾಧನೆಗೆ ಸಮನಾಗುವ ಬಗೆಯಿಂದ—ಇನ್ನೊಂದು ನವ ಸೃಷ್ಟಿಯನ್ನು ಮಾಡುತ್ತಾನೆ. 'ಸೃಷ್ಟಿ' ಎಂಬ

ಗೀತರೂಪ—ನಾಟಕಕ್ಕೆ ಬೇಕು. ಗೀತನಾಟಕ, ಬಿಡುಗೀತೆಗಳ ಒಂದು ಗುಚ್ಛವಾಗಲಾರದು. ಬೇರೆಯ ರೂಪಕದಲ್ಲಿ ಹೇಳುವುದಾದರೆ—ಬಿಡುಗೀತೆ ಒಂದು ಶಿಲ್ಪಕೃತಿ; ಅದರ ವಿಷಯ, ವಿಸ್ತೃತಿ ಚಿಕ್ಕದು. ಆದರೆ ನಾಟಕ—ಒಂದು ವಾಸ್ತುವಿದ್ದಂತೆ; ಹತ್ತು ಶಿಲ್ಪಗಳನ್ನು ಸೇರಿಸಿದೊಡನೆ ಒಂದು ವಾಸ್ತುವಿನ ರಚನೆಯಾಗಲಾರದು. ವಾಸ್ತುವಿನಲ್ಲಿ ಸೇರಿವ ಯಾವೊಂದು ಅಂಗಕ್ಕೂ ಸ್ವತಂತ್ರವಾದ ಚೆಲುವಿನ ಆಳತೆಯಿಲ್ಲ. (ಅಂದರೆ ಸ್ವತಂತ್ರ ಚೆಲುವನ್ನು ತೋರಲಾರದೆಂದಲ್ಲ.) ಅದು ಒಟ್ಟು ವಾಸ್ತುವಿನ ಯೋಜನೆ, ಚೆಲುವುಗಳನ್ನು ಪ್ರತಿಪಾದಿಸುವುದರಲ್ಲಿ ಎಷ್ಟು ಪೂರಕವಾಗುವುದೋ—ಅಷ್ಟರ ಮೇಲಿಂದ ಅದನ್ನು ನಾವು 'ಚೆಲುವು' ಎಂದು ಎಣಿಸಬೇಕು. ಒಂದು ಮಂದಿರದ ಸ್ತಂಭ, ಬೋಧಿಗೆಗಳನ್ನು ಬೇರೆಯೇ ಆಗಿ ತೆಗೆದು ನೋಡಿ-ನಾವು ಅದೊಂದನ್ನು ಚೆಲುವು—ಎನ್ನಬಹುದಾದರೂ, ಅದರ ಚೆಲುವಿನ ಸಮನಾದ ತೂಕವು, ಅದು ಮಂದಿರಕ್ಕೆ ಹೊಂದಿಕೆಯಾಗುತ್ತದೆಯೇ ಎಂಬುದರಲ್ಲಿ ಇದೆ. ಆದುದರಿಂದ ಬಿಡು ಹಾಡಿನ ರೂಪ, ಗೀತನಾಟಕಕ್ಕೆ ಸಹಾಯವಾಗಲಾರದು. ಇಲ್ಲಿ ಗೀತಕ್ಕೆ—ಇಡಿಯ ನಾಟಕವೇ ಒಂದಾಗಿದೆ. ಬೇರು, ಕುಡಿ, ಎಲೆ, ಹೂ, ಕಾಂಡಗಳೆಲ್ಲ ಹೊಂದಿಕೆಯಾಗುವಂತೆ, ಒಂದರಿಂದ ಇನ್ನೊಂದು ಉದ್ಭವಿಸುವಂತೆ ಕಾಣುವುದರಲ್ಲಿ ಚೆಲುವುಂಟೇ ಹೊರತು ಬೇರೆಯಾಗಿಲ್ಲ. ಗುಲಾಬಿ ಹೂ ಚೆನ್ನಾಗಿದೆ ಎಂದೊಡನೆ ಗಿಡ ಚೆನ್ನಾಗಿರಬೇಕಿಲ್ಲ. ಬಹುವಾಗಿ ಗುಲಾಬಿಯ ಹೂವಿಗೂ ಗಿಡಕ್ಕೆ ಹೊಂದಿಕೆಯೇ ಕಾಣಿಸದು. 'ಗುಲಾಬಿ ಚೆನ್ನಾಗಿದೆ' ಎನ್ನಲು ಹೂ ಗಿಡಗಳು ಎರಡೂ ಹೊಂದಿಕೆಗೊಂಡು ಚೆನ್ನಾಗಿರಬೇಕು. ಅಲ್ಲಿ ಒಟ್ಟು ನೋಟ ಮುಖ್ಯ ನಮಗೆ.

ಈ ಒಮ್ಮೈಶೋಭೆಯನ್ನು—ನೋಡುವಾಗ ನಾವು ನಮ್ಮ ರೂಢಿಬದ್ಧವಾಗಿ ಬಂದ ಗೀತದ ಆಯ ಆಳತೆಯನ್ನು ಮರೆಯಬೇಕಾಗುತ್ತದೆ. ಬರಿಯ ಮುದ್ರಣದಲ್ಲಿ—ಆರೂಪವನ್ನು ತಾವಿಲ್ಲಿ ಕಾಣಲಾರಿರಿ ಎಂಬುದು ನನಗೆ ಗೊತ್ತು. ಅಲ್ಲಲ್ಲಿ ರಾಗಗಳ ಹೆಸರನ್ನು ತೋರಿಸಿದ್ದರೂ, ಸ್ವತಃ ಸಂಗೀತಕಾರರೂ ಅದನ್ನು ತಿಳಿಯುವುದು ಕಷ್ಟ. ಪಾಶ್ಚಾತ್ಯ ರೀತಿಯಲ್ಲಿ ಚಿತ್ರಿಸುವುದು ಸಾಧ್ಯವಾಗಿದ್ದರೆ—ಆಗ, ಸ್ವರಜಿತು ಸಹಿತವಾಗಿಯೇ

ಸುಲಭವಲ್ಲ. ವಿವಿಧ ಸ್ವರ ಸ್ಥಾಯಿಗಳನ್ನು ಕೊಡುವುದು—ನಮ್ಮ ಶ್ರುತಿಯ ಮೇಲೆ ಹೊಂದಿದೆ. ಅದು ವ್ಯತ್ಯಾಸವಾದಲ್ಲಿ, ಧ್ವನಿಯ ಏರಿಳಿತಗಳು, ಬೇರೆ ಬೇರೆ ಹಾಡುಗಾರರ ಕಂಠಕ್ಕೆ ಸರಿಯಾಗಿ, ಭಿನ್ನ ಭಿನ್ನ ಪರಿಣಾಮ ಗಳನ್ನು ತೋರಿಸಬಹುದು. ಮನುಷ್ಯ ಜಡವಾದ ವಾದ್ಯವಲ್ಲವಷ್ಟೆ.

ಇನ್ನೂ ಒಂದು ತೊಡಕಿದೆ. ಸಾಹಿತ್ಯದೊಡನೆ ಇಲ್ಲಿ ಗೀತ ಸೇರಿದೆ. ವಿಚಾರ, ಭಾವನೆಗಳು ನಟನನ್ನೂ ಹೊಂದಿವೆ. ಆತ ಕೃತಿಕಾರನ ಉದ್ದೇಶವನ್ನು ಎಣಿಸಿ ಹಾಡುವಾಗ—ಆ ಉದ್ದೇಶಕ್ಕೆ ಸಮನಾಗಿ ಸ್ವರದ ಏರು, ತಗ್ಗು, ಕೀರು, ಬಿರುಸು, ಮೆಲುವಿಕೆ, ಗಟ್ಟಿತನ-ಹೋಗಬೇಕು. ಸ್ವರಸ್ವರ ಗಳೊಳಗಿನ ದೂರ, ಆಗ ಒಂದೇ ಗತಿಯನ್ನು ಹಿಂಬಾಲಿಸುವಂತಿಲ್ಲ. ನಮಗೆ ಪರಚಿತವಾದ ತಾಳ, ಲಯಗಳನ್ನೇರಿ ಹೋಗಬೇಕಿಲ್ಲ. ಭಾವನೆ—ಕಾಲವನ್ನು ದ್ವಿಗುಣಿಸಿಸುವ, ತ್ರಿಗುಣಿಸುವುದರಿಂದಲೇ ಪ್ರಕಾಶ ಹೊಂದಲಾರದು. ಆದುದರಿಂದ—ಈ ಗೀತ ನಾಟಕಗಳನ್ನು, ಮಾತ್ರೆಗಳನ್ನೆಣಿಸಿ, ತಾಳಕ್ಕೆ ತಕ್ಕಂತೆ ಬಡಿದು, ಜಜ್ಜಿ ತುಂಡರಿಸಲು ಬಂದರೂ, ಆ ರೀತಿ ಹಾಡುವುದರಿಂದ ವಿಚಾರ, ಭಾವನೆಗಳ ಪ್ರತಿಪಾದನೆ ಮಾತ್ರ ಆಗುವಂತೆ ಕಾಣೆ.

ಈ ಎಲ್ಲ ಕಾರಣಗಳಿಂದಾಗಿ, ನಾಟ್ಯ ವಿಲಾಸಿಗಳಲ್ಲಿ ನನ್ನ ಕೇಳಿಕೆಯೆಂದರೆ, ಈ ಯಾವುದೇ ನಾಟಕವನ್ನು ನನ್ನ ಆಶಯ ತಿಳಿಯದೆ, ಅನುಮತಿಯಿಲ್ಲದೆ ಆಡಬಾರದೆಂದು.

ಇಲ್ಲಿ ಪ್ರಯೋಗಿಸಿದ ಗೀತ ಮಾರ್ಗವನ್ನು ಕುರಿತು ಎರಡು ಮಾತು ಬರೆಯುತ್ತೇನೆ. ನಾನು ಜಾನಪದ, ಮಾರ್ಗ ಪದ್ಧತಿಯೆರಡನ್ನೂ ಬಳಸಿಕೊಂಡಿದ್ದೇನೆ. ಮಾರ್ಗ ಪದ್ಧತಿಯನ್ನು ಆಯುವಾಗ, ಉತ್ತರಾದಿಯ ಪರಿಚಯ ಹೆಚ್ಚಿದ್ದುದರಿಂದ ಅದನ್ನು ಆರಿಸಿಕೊಂಡಿದ್ದೇನೆ. ಮುಕ್ತ ದ್ವಾರ (1930) ನನ್ನ ಮೊದಲ ಕೃತಿ. ಇದು ನೃತ್ಯ, ಗೀತನಾಟಕಗಳ ಒಂದು ಮೇಳ. ಇಲ್ಲಿ ಗೀತರೀತಿಯು ತೀರ ಸುಲಭದ್ದು. ಮುಂದೆ ನಾನು ನಡೆಯಿಸಿದ ಪ್ರಯೋಗ ಪ್ರಹಸನ. 'ಬದುಕಬಹುದು' ('34) ರಲ್ಲಿ ಬರೆದು ಆಡಿದುದು. ಉತ್ತರಾದಿಯ ರೀತಿಯನ್ನು ಕೇವಲ ವಿನೋದಕ್ಕಾಗಿ ಬಳಸಿಕೊಂಡರೀತಿ ಇದು. 'ದಿ ಮಿಕಾಡೋ' ಎಂಬ ಯುರೋಪಿನ ಒಪೆರಾ ನೋಡಿ ಅಂಥದೊಂದು ಪ್ರಯೋಗ ಮಾಡಿದೆ. ಈ ಎಲ್ಲ ನಾಟಕಗಳನ್ನು

ರಂಗಭೂಮಿಗೆ ತಂದುದರಿಂದ, ಅವು, ಕೇವಲ—ಆರಾಮಾಸನದ ಕನಸುಗ. ಳೆಂದು ಯಾರೂ ತಿಳಿಯಬೇಕಾಗಿಲ್ಲ.

ಈ ಮಾದರಿ ಯತ್ನಿಸುವಾಗಲೇ, ನನಗೆ ನಮ್ಮ ಜಾನಪದ ಗೀತೆಗಳ ಮೇಲಿನ ಕುತೂಹಲ ಹೆಚ್ಚಿತು. ಜನಸಾಮಾನ್ಯರ ಸರಳ ಜೀವನ, ಸರಳ ಭಾವನೆಗಳನ್ನು ಅವು ಎಷ್ಟು ಚೆನ್ನಾಗಿ, ಸರಳವಾಗಿ ಚಿತ್ರಿಸುತ್ತವೆ—ಎಂದು ಮನಗಂಡೆ. ಅದರ ಫಲವೇ ಸೋಮಿಯ ಸೌಭಾಗ್ಯ. ನಮ್ಮ ತುಳು ನಾಡಿನ ಜಾನಪದ ಗೀತಗಳ ವರ್ಚಸ್ಸನ್ನು ಅಲ್ಲಿ ನೀವು ಕಾಣಬಹುದು. ಹಿಂದೆಯೇ ಬಿಡುಗೀತೆಗೂ, ಗೀತಾನಾಟಕಕ್ಕೂ ಇರುವ ವ್ಯತ್ಯಾಸ ಹೇಳಿದೆ ನಾದುದರಿಂದ, ಇಲ್ಲಿ ತಿರುಗಿ, ಇವೆಲ್ಲ ಉದ್ಧೃತ ಜಾನಪದ ಗೀತೆಗಳಲ್ಲ ವೆಂದು, ತಮಗೆ ಹೇಳಬೇಕಾಗಿಲ್ಲವಷ್ಟೆ. 'ಸೋಮಿ ಸೌಭಾಗ್ಯ' ದುರಂತ ಚಿತ್ರ, ಕಣ್ಣೀರಿನ ಕತೆ. ಅದಕ್ಕೆ ಪ್ರತಿಯಾದ ವಿಕಟವಿಮರ್ಶೆ "ಯಾರೋ ಅಂದರು." ಅಲ್ಲಿ ಒಂದು ಸೊಲ್ಲಿನ ವಿಷಯವೂ 'ಗೀತವೂ' ಸೇರಿ ಬೆಳೆದು. ಇಡಿಯ ನಾಟಕದ ರೂಪತಾಳಿದೆ.

ಈ ಉತ್ತರಾದಿ ಗೀತ ಮಾರ್ಗದಲ್ಲೂ, ಏಕೆ ನಮ್ಮ ದೇಶೀಯ ಗೀತ ವರ್ಗದಲ್ಲೇ—ನಾಡನ್ನು ಆವರಿಸಿರುವ ಭಕ್ತಿ, ಕರುಣ, ದುಃಖದ ಪ್ರಭಾವ ಗಳು ಬಲು ಹೆಚ್ಚು. ಅವು ನಮ್ಮ ಗೀತಮಾರ್ಗವನ್ನು ಆವರಿಸಿ ದಾರಿಗೆಡಿಸಿ ವೆಯೆಂದರೂ ತಪ್ಪಾಗಲಾರದು. ಅವುಗಳ ಮೂಲಕ—ರೌದ್ರ, ಆನಂದ, ಉನ್ಮಾದ ಭಾವಗಳನ್ನು ಚಿತ್ರಿಸಲು ಬಲು ಬಲು ಕಷ್ಟವೆಂದರೂ ಅಡ್ಡಿಯಿಲ್ಲ. ಆದುದರಿಂದಲೇ ಏನೋ, ದುರಂತ ಕತೆಗಳ ಚಿತ್ರಣ ಮಾತ್ರ ದಕ್ಷಿಣಾದಿ, ಉತ್ತರಾದಿ ಗಾನ ಪದ್ಧತಿಗಳಿಂದ ಸುಲಭವಾಗುತ್ತವೆ. 'ಕಿಸಾಗೋತಮಿ' (1940) ಸಾವಿತ್ರಿ, ಲವಕುಶ (1945) ಅಂಥವು. ಸಾವಿತ್ರಿ ಸತ್ಯವಾನ ನಗು—ವ್ಯಥೆಗಳ ಸುಮ್ಮಿಶ್ರಣ. ಇಲ್ಲಿ ಕೊನೆಯದಾದ ಬುದ್ಧೋದಯವು (1946) ತೀರ ಹೊಸತಾದ ಒಂದು ರಚನೆ. ಇವೆಲ್ಲ ಉತ್ತರಾದಿಯ ಗಾನದ ಗತಿಯಲ್ಲಿ ಮುಂದುವರಿಯುವುವು.

ಈ ಗೀತ ನಾಟಕಗಳಲ್ಲಿ—ಇನ್ನೊಂದು ಸಂಗತಿಯನ್ನು ತಾವು ನೋಡಬಹುದು. ಕೆಲವುಗಳಲ್ಲಿ ನೇಪಥ್ಯ ಗಾನ—ಮೇಳ—ಎಂದು ನಾಟ. ಕದ ಪ್ರತ್ಯಕ್ಷ ಪಾತ್ರಗಳಲ್ಲದೆಯೂ, ಪೋಷಕವಾಗಿಯೂ ಬರುವ ಹಾಡು. ಗಾರಿಕೆಯ ಸ್ಥಾನವನ್ನು. ಇವು ನಮ್ಮ ದೇಶೀಯ ಬಯಲಾಟದ ಮಾದ

ರಿಯಲ್ಲಿವೆ. ಗ್ರೀಕ್ ನಾಟಕ ರೀತಿಯಲ್ಲೂ ಇದು ಪ್ರಧಾನ ಸಾಧನವಾಗಿದೆ. ಕಾರಣ ಇದು ವಾಸ್ತವಿಕವಲ್ಲವಾದರೂ—ನಾಟಕದ ಹೇತುವನ್ನು ಕ್ಷಿಪ್ರದಲ್ಲಿ ವಿಷದಗೊಳಿಸಲು, ಮುಂದುವರಿಸಲು, ಸಹಾಯವಾಗುವ ಅನುಕೂಲತೆಗಳಿಂದು ಬಳಸಿಕೊಂಡುದಾಗಿದೆ.

ನಾನು ಈ ಕೆಲವು ನಾಟಕಗಳಲ್ಲಿ ಆರಿಸಿಕೊಂಡ ವಿಷಯಗಳು ಎಂತಹ ಕಲಸುಮೇಲೋಗರ—ಎಂದು ಅನಿಸಲೂ ಬಹುದು ಕೆಲವರಿಗೆ. ಮುಕ್ತದ್ವಾರದಂಥದು ವಸ್ತುಲೋಕ, ಕಲ್ಪನಾ ಲೋಕಗಳ ಸಮ್ಮೇಳವಾಗಿದೆ. ಕತೆ—ವಾಸ್ತವಿಕವಲ್ಲ, ಆದರೆ ಅದಕ್ಕೆ ಕಾರಣವಾದ ವಿಷಯ—ಮಾನವನ ಆಕಾಂಕ್ಷೆಯ ಒಂದು ರೂಪ. ಜೀವನ, ಧ್ಯೇಯಗಳೆಡೆಯಲ್ಲಿನ ಸೇತುವೆಯಿದ್ದಂತೆ ಅದು. ಯಾಜ್ಞವಲ್ಕ್ಯ ಇದ್ದಿರಲಿ ಇಲ್ಲದಿರಲಿ, ಮುಂದೆ ಕೃಷ್ಣ ಯೇಸುಗಳು ಸೇರಲಿ, ಸೇರದಿರಲಿ—ಜೀವನ ಮತ್ತು ಧರ್ಮದಲ್ಲಿ ಏಕತೆಯನ್ನು ಎಣಿಸುವ ಮಾನವಳ ಹಂಬಲಮಾತ್ರ ವಸ್ತುಲೋಕದ್ದೇ.

ಲವಕುಶ, ಸಾವಿತ್ರಿ ಸತ್ಯವಾನರ ಕತೆಗಳು—ಪುರಾಣದ ಕತೆಗಳು. ನಾನು ಪುರಾಣವಾದಿಯಲ್ಲ ಎಂದು ನಾನೂ ಬಲ್ಲೆ, ನನ್ನಗೆಳೆಯರೂ ಬಲ್ಲರು. ಆದುದರಿಂದ ಕೆಲವು ಕೇವಲ ಅರ್ವಾಚೀನ ಮನಸ್ಕರು—ಈ ನನ್ನ ಮರುಳನ್ನು ಕಂಡು ನಗಬಹುದು. ಆದರೆ ನಾನು ಪುರಾಣವನ್ನು ಚರಿತ್ರೆಯಾಗಿ ಪೂಜಿಸಲಾರೆನಾದರೂ, ಅಲ್ಲಿನ ಹಲವು ಕತೆಗಳು ನನ್ನ ಪಾಲಿಗೆ ಭಾವನಾಲೋಕದ ಸತ್ಯಗಳು. ಮಾನವನನ್ನು ತೂಗಿಸುವ ಎಲ್ಲ ರಾಗದ್ವೇಷಗಳ, ಉಕ್ಕು ಸೊಕ್ಕು, ಕುಗ್ಗು ತಗ್ಗುಗಳು ಅಲ್ಲಿ ತುಂಬಿರುವಷ್ಟು ದಿನ, ಅವು ನನ್ನನ್ನು ತಮ್ಮ ಮೋಹಕತೆಯಲ್ಲಿ ಬಿಗಿಯದಿರಲಾರವು. ಕೃತಿ ನಿರ್ಮಾಣಕಾಲದಲ್ಲಿ, ಹಳೆಯ ಕನಸಿನ ಲೋಕದ್ದೇ ಇರಲಿ, ಅವರ ಕನಸನ್ನು ನಾನು ಹೆಣೆದು, ನನ್ನ ಮಾನವತೆಯನ್ನು ಅವುಗಳಲ್ಲಿ ತೀಲಿ ಬಿಡಲು ಯತ್ನಿಸಿದೆ. ಅಲ್ಲಿನ ನೋವು ನಗುಗಳು ನನ್ನನ್ನು ತೂಗಿಸಿವೆ. ಯತಾರ್ಥವಾದ ಚರಿತ್ರೆಯ ಕಥೆಗಳೇನೆ ನಮ್ಮನ್ನು ಓಲಾಡಿಸಬೇಕೆಂಬ ಹಟವಾಗಲಿ, ರಸಶೂನ್ಯತೆಯಾಗಲಿ ನನ್ನಲ್ಲಿಲ್ಲ.

ಕಿಸಾಗೋತಮಿ, ಬುದ್ಧೋದಯ ನಾಟಕಗಳು ಪುರಾಣದಂತಿದ್ದರೂ ಅವು ನಿಜ ಇತಿಹಾಸಗಳು. ಮಾನವನನ್ನು ನಿತ್ಯವೂ ತಳಮಳಗೊಳಿಸುತ್ತಿರುವ ಸಾವು, ದುಃಖ, ಹುಟ್ಟುಗಳ ಪ್ರಶ್ನೆಗಳು—ಬುದ್ಧ, ಕಿಸಾಗೋತಾಮಿ

ಯರನ್ನು ಉದ್ವೇಗಗೊಳಿಸಿದಷ್ಟಲ್ಲವಾದರೂ, ಸ್ವಲ್ಪ ಪ್ರಮಾಣದಿಂದಲಾದರೂ ನನ್ನನ್ನು ತೂಗಿಸಿವೆ. ಅದರಿಂದ-ತಿರುಗಿ ಆ ಕನಸನ್ನು ಚಿತ್ರಿಸಲು ಯತ್ನಿಸಿದ್ದೇನೆ. ಇಂದೂ ನಾಳೆಯೂ ನನ್ನ ಮನಸ್ಸು ಅವುಗಳು ಬಡಿತಕ್ಕೆ ಮಿಡಿಯುವ ತಂತಿಯಾಗಬೇಕೆಂಬುದೇ ನನ್ನ ಬಯಕೆ. ಅದರಿಂದ—ನನಗೂ, ಬಾಹ್ಯ ಸಜೀವ ಜಗತ್ತಿಗೂ ಇರುವ ಮುಖ್ಯ ಹೊಂದಿಕೆ. ಆ ಬಯಕೆಯಿಂದಲೇ—ನಿರ್ಜೀವ ಜಗತ್ತಿಗೂ, ಮನಸ್ಸು ಮಗುವಿನಂತೆ ಜೀವ ಆರೋಪಣೆಮಾಡಲು ಬಯಸುತ್ತದೆ. ಈ ಜೀವ, ಪ್ರಾಣ, 'ಆರೋಪಿತ'ವೇನೋ ಇದ್ದೀತು. ಆದರೂ ನನ್ನನ್ನು ನಗಿಸುವ ಕಡಲು, ಮುಗಿಲು—ನನಗೆ ಜೀವ. ಬಿರುಗಾಳಿ, ಸಿಡಿಲು—ನನಗೆ ಸಜೀವ. ಎಲ್ಲದರೊಡನೆ ಒಂದಾಗಿ ಬೆರೆಯುವ ಮನಸ್ಸು, ಜಡವಾದ ಜಗತ್ತಿಗೊಂದು ಜೀವವನ್ನು ಕೊಟ್ಟರೆ ಹುಚ್ಚಾದೀತು; ಆದರೂ ಆ ಹುಚ್ಚುತನ ಇರಲಿ. ಆ ಹುಚ್ಚಿಗೆ ಕಾರಣ—ನಾವೇನೆ. ನಮ್ಮ ಜೀವ ನಮ್ಮೀ ಶರೀರದ ಮೇರೆಯನ್ನು ದಾಟಬೇಕು. ಹಾಗೆ ದಾಟಿ ಯಾವತ್ತು ಜೀವಗಳನ್ನು ಆವರಿಸಬೇಕು. ಅದೂ ಸಾಲದು. ಅರಿತ, ಅರಿಯದ ಎಲ್ಲ ವಸ್ತು ಲೋಕವನ್ನು ತುಂಬಬೇಕು ಎಂಬುವ ಹೆಬ್ಬಯಕೆ. ಈ ಬಯಕೆಯ ಮರುಳಾಟಿಕೆಯು ಏನೋ-'ಋತು ಯಾತ್ರೆ'ಗೆ ಹೇತುವಾಯಿತು. ಇಲ್ಲಿ ಗಾಳಿ, ಮುಗಿಲು, ಹಿಮ, ಮಳೆಗಳು ಮಾನವನೊಂದಿಗೆ ಕಾಡಿ, ಕೂಡುವ ಗೆಳೆಯರು. ಅದೊಂದು ವಿಲಾಸ.

ಋತು ಯಾತ್ರೆಯಲ್ಲಿ ಜಾನಪದ, ಮಾರ್ಗ ಗೀತಗಳ ಮಿಲನವಿದೆ. ಸಾಲದುದಕ್ಕೆ ಪ್ರದರ್ಶನದಲ್ಲಿ ಮಾತು, ಗೀತಗಳಿಗೆ ಸಮುತೂಕವಾಗಿ ನೃತ್ಯವೂ ಸೇರಿಕೊಳ್ಳುವುದು. ಇಲ್ಲಿ ಮಾತ್ರ—ತಾವು ಪುಸ್ತಕದ, ಬರಿಯ ಮಾತೊಂದರಿಂದಲೇ ತೃಪ್ತರಾಗಬೇಕು.

'ಯಾರೋ ಅಂದರು', 'ಸೋಮಿಯ ಸೌಭಾಗ್ಯಗಳು' ಪುರಾಣದ ಈಚೆಗೆ ವಾಸ್ತವಿಕ ಜೀವನದಲ್ಲಿ ಕಾಣಿಸುವ ಸನ್ನಿವೇಶಗಳಾಗಿವೆ. ಅರ್ವಾಚೀನರ ಪಾಲಿಗೆ 'ಸಮ'ನೆನಿಸಬಹುದಾದ ನಾಟಕದ ವಿಷಯಗಳು. ಈ ಬಗೆಬಗೆಯ ಪಾಕಗಳು ಗುಚ್ಛವು ವಾಚಕರಲ್ಲಿ ಕೆಲವರಿಗೆ—ಹಳೆ, ಹೊಸತನಗಳ 'ಕಲಸು ಮೇಲೋಗರ'ವಾಗಿ ಕಂಡರೆ, ಕ್ಷಮೆಯಿರಲಿ. ನಾನೇ ನನ್ನ ಕೃತಿ. ಎಷ್ಟು ಮರೆಯಿಸಿದರೂ, ಅವನವನ ಕೃತಿಗಳು ಅವನವನನ್ನು ಬಯಲಿಗೆಳೆಯುತ್ತದೆ. ಈ 'ಅವನು' ತನ್ನತನದ

(Subjective) 'ಅವನೂ' ಇರಬಹುದು. ಆದರೂ ಇದು ಅವನೇ.

ಮುನ್ನಡಿ ಬರೆಯುವ ಹವ್ಯಾಸ ಕಡಮೆ. ಬರೆದರೂ ಚುಟುಕಾಗಿ ಬರೆಯುವ ಚಾಳಿ ನನ್ನದು. ಇಲ್ಲಿ ಮಾತ್ರ—ತಮ್ಮ ತಾಳ್ಮೆಯನ್ನು ಕೆಣಕುವವನಂತೆ ಹತ್ತೆಂಟು ಪುಟಗಳನ್ನು ಬರೆಯುತ್ತಿದ್ದೇನೆ. ಮುಂದಿನ ನಾಟಕ ರೀತಿಗಳ ಹಿನ್ನೆಲೆಯಾಗಲೆಂದು.

ಇವುಗಳ ಪ್ರಯೋಗ ಮಾರ್ಗವನ್ನು ಕುರಿತು ಒಂದೆರಡು ಸಂಗತಿ ಹೇಳದಿರಲಾರೆ.

ಕನ್ನಡ ನಾಡಿನಲ್ಲಿ—ರೂಢಿಬದ್ಧ ರಂಗಭೂಮಿಯ ನಾಟಕಗಳನ್ನು ಬಿಟ್ಟರೆ, ಕಾಣಸಿಗುವುದು ಕೆಲವೊಂದು ವಾಸ್ತವಿಕ ಗದ್ಯ ನಾಟಕಗಳು.

ಅವುಗಳನ್ನು ತೋರಿಸುವ ಮಾದರಿಯಲ್ಲೇ ಇವನ್ನು ತೋರಿಸುವುದು ಉತ್ತಮ ರೀತಿಯಲ್ಲ ಎಂದೆನಿಸುತ್ತದೆ. ನಾಟಕ ನಿರ್ಮಾಣದ ವಿಚಾರ ಹೇಳುವಾಗ, 'ವಾಸ್ತವಿಕತೆ'ಗೆ ಇರುವ ಮಿತಿಯನ್ನು ನಾನು ಹೇಳಿದಂತೆ, ಚಿತ್ರಣ ರೀತಿಗೂ ಆ ಮೇರೆ ಇದೆ ಎನ್ನುತ್ತೇನೆ. ನಟನು—ಗದ್ಯವನ್ನು ಅಭಿನಯಿಸಿದಂತೆಯೇ ಪದ್ಯವನ್ನು ಅಭಿನಯಿಸಬೇಕೇ? ಅದನ್ನು ತಿಳಿಯಲು—ನಾವು ನಾಟ್ಯ, ನೃತ್ಯಗಳ ಅಂತರವನ್ನು ತಿಳಿಯಬೇಕು. ಅಭಿನಯವು ವಾಸ್ತವಿಕ ಹಾದಿಯಿಂದ ಈಚೆ ಸರಿದು, ತನ್ನ ನಾವೀನ್ಯತೆಯನ್ನು ತೋರಬಹುದು. ಉಡುಗೆ ತೊಡುಗೆ, ರಂಗ ರಚನೆಗಳೆಲ್ಲವು—ಅವಾಸ್ತವಿಕ ಚಿತ್ರಣ ಶೈಲಿ ಗೊಪ್ಪುವಂಥ, ಕಲ್ಪನಾರಾಜ್ಯದ ಚೆಲುವಿಗೆ ಒಪ್ಪುವಂಥ ರೀತಿಯಲ್ಲಿದ್ದರೆ, ಭಾವನಾಲೋಕಕ್ಕೆ ಇನ್ನಷ್ಟು ಕಳೆಗಟ್ಟುವುದು.

'ಲವಕುಶ'ವನ್ನು ರಂಗಭೂಮಿಗೆ ತಂದ ಒಂದೆರಡು ರೀತಿಗಳನ್ನು ಕುರಿತು ಹೇಳಿ, ಈ ವಿಚಾರವನ್ನು ನಾನು ಸ್ಪಷ್ಟಪಡಿಸುತ್ತೇನೆ.

ಮೊದಲ ಬಾರಿಗೆ ಅದನ್ನು ಬರಿಯ—ಮೂಕ ನಾಟಕವಾಗಿಯೇ ಆಡಿದೆವು. ನಟರು, ಬರಿ ನಟರು ಮಾತ್ರ. ಯಾವತ್ತು ಹಾಡುಗಳ ಹಿನ್ನೆಲೆಯಿಂದ. ಆಗ ಪ್ರೇಕ್ಷಕರ ಕಿವಿಯು ಹಾಡನ್ನು ಆಶ್ರಯಿಸುವುದು. ನಟರು—ಜನರ ಊಹೆ ಕುಣಿದಾಡಲು ಅನುಕೂಲಿಸುವ ಸಂಕೇತಗಳಾಗುತ್ತಾರೆ. ಪ್ರೇಕ್ಷಕನು ಈ ಸಂಕೇತದಿಂದ ಪ್ರೇರಿತನಾಗಿ ತನ್ನದೇ ಆದ ಲವಕುಶ, ರಾಮ ಸೀತೆಯರನ್ನು, ಮನೋದ್ಯಾನದಲ್ಲಿ ನಿರ್ಮಿಸಿಕೊಳ್ಳುತ್ತಾನೆ. ವಾಸ್ತವಿಕತೆಯಲ್ಲಿ ಪ್ರೇಕ್ಷಕ (Passive) ತುಂಬ ಜಡ; ಕಲ್ಪನೆಯಲ್ಲಿ ಆತನು

ಅವನವನ ಸಂಸ್ಕಾರಕ್ಕೆ ತಕ್ಕಂತೆ ಚೇತನವುಳ್ಳ ಸೃಷ್ಟಿಕಾರ. ಈ ಬಗೆಯ ನಿರ್ದೇಶನವು ರಂಗಭೂಮಿಯಲ್ಲಿ ತುಂಬ ಪರಿಣಾಮಕಾರಿಯಾಯಿತು.

ಎರಡನೆಯ ಬಾರಿಗೆ— ಇದೇ ನಾಟಕವನ್ನು ನಟರ ಬಾಯಿಂದ ಹಾಡಿಸಿ, ಆಡಿಸಿ ತೋರಿಸಿದೆವು. ಇದೂ ಒಂದು ಬಗೆಯ ಸೊಗಸನ್ನು ಉಂಟುಮಾಡಿತು. ಪ್ರೇಕ್ಷಕರ ಮುಂದೆ ರಾಮ, ಲಕ್ಷ್ಮಣರೇ ಜನರಂತೆ ಆಡಿ, ನುಡಿದುಹೋದರು.

ಮೂರನೆಯ ಬಾರಿಗೆ—ಇದನ್ನೇ ಛಾಯಾ ನಾಟಕವಾಗಿ ಆಡಿದೆವು. ಉಳಿದೆಲ್ಲ ರೀತಿಯಿಂದ, ನಟರು ನಟರಾಗಿದ್ದರು. ಅವರ ಪ್ರತ್ಯಕ್ಷ ದರ್ಶನ ಪ್ರೇಕ್ಷಕರಿಗಿಲ್ಲ. ಅವರ ನೆರಳು ಮಾತ್ರ ಜನರಿಗೆ ಗೋಚರ. ಈ ನೆರಳು —ವ್ಯಕ್ತಿಯ ಪ್ರತಿಷ್ಠೆಗೆ ಅನುಗುಣವಾದ ರೀತಿಯಲ್ಲಿ ಕಿರಿದು, ಹಿರಿದು ಆಗುವಂತೆ ಮಾಡಲು ಅನುಕೂಲವಿದೆ. ಆದರೆ ನಟ ವಾಸ್ತವಿಕವಾಗಿ ಅಭಿನಯಿಸಲಾರ. ಅವನ ಕಣ್ಣು, ಮೂಗು, ಕಪೋಲಗಳು--ಕೆಲಸಮಾಡುವಂತಿಲ್ಲ. ಅವನ ನಿಲುವು, ಮೈ ರೇಖೆ, ಚಲನಗತಿಗಳು ಅವನ ಭಾವನೆಯನ್ನು ಪ್ರಕಟಪಡಿಸಬೇಕು. ಆದುದರಿಂದ ನಟರ ನಡಿಗೆ, ಭಂಗಿ, ಅಂಗ ವಿನ್ಯಾಸಗಳೆಲ್ಲ—ಈ ಉದ್ದೇಶಕ್ಕೆ ಅನುಕೂಲವಾಗುವಂತೆ ಸಾಗಬೇಕು. ವ್ಯಕ್ತಿಗಳ ಸಹಜರೂಪವನ್ನು ತೆಗೆದು, ತೆರೆಯಲ್ಲಿ ನೆರಳನ್ನು ನಿಲಿಸಿದ್ದಾಯಿತು. ಅಲ್ಲಿನ ಸ್ಥೂಲ ಆಕಾರದ ಮೇಲೆ ಪ್ರೇಕ್ಷಕ 'ತನ್ನ ನಟ'ನನ್ನು, ಸೃಷ್ಟಿಸಿಕೊಳ್ಳುತ್ತಾನೆ. ಆಗ ಹಿನ್ನಲೆಗೆ—ನಾಟಕ ಸನ್ನಿವೇಶದ ಆವರಣವನ್ನು ಕಲ್ಪಿಸುವ ವಾದ್ಯಮೇಳವನ್ನು ಸೇರಿಸಿದೆವು. ಅವುಗಳ ಪ್ರೇರಣೆಯಿಂದ ಪ್ರೇಕ್ಷಕ ತಾನೇ ಕೃತಿಕಾರನಂತೆ ಆಗುತ್ತಾನೆ. ಈ ರೀತಿಯಿಂದ ಪ್ರೇಕ್ಷಕರನ್ನು ಒಂದು ಕಲೆಯು ಎಷ್ಟೆಷ್ಟು ಹೆಚ್ಚಾಗಿ ಚೈತನ್ಯ (active) ಶೀಲರನ್ನಾಗಿ ಮಾಡುತ್ತದೆಯೋ, ಅಷ್ಟಷ್ಟು ಪ್ರಭಾವಶಾಲಿಯಾದ ಕಲಾ ನಿರ್ದೇಶನ ಅದು ಆಗುತ್ತದೆ.

ನಾವು ನಡೆಯಿಸಿದ ಈ ಮೂರು ಬಗೆಯ ಪ್ರಯೋಗಗಳೂ—ನಮ್ಮ ನಾಟ್ಯ ಕಲಾಸಿಗಳ ಅಲ್ಪಮಿತಿಗೆ ಒಳಗಾಗಿದ್ದರೂ ಕೂಡ, ಸಾಕಷ್ಟು ಪ್ರಭಾವಶಾಲಿಗಳಾದುವೆನ್ನಬಹುದು. ನಮ್ಮ ಪ್ರೇಕ್ಷಕ ಗೆಳೆಯರ ಮಾತನ್ನು ನಂಬುವುದಾದರೆ. ಅಂತು ಈ ರೀತಿಗಳನ್ನು ಬಳಸಿಕೊಂಡು, ರಂಗ ಮಂಟಪವನ್ನು ಬೆಳಗಿಸಬಹುದೆಂಬುದಾದರೂ ನಮಗೆ ತಿಳಿಯಿತು.

ರಂಗಭೂಮಿ—ಒಂದು ದೊಡ್ಡ ಲೋಕ. ಗೀತ, ಚಿತ್ರ, ಸಾಹಿತ್ಯ ಇವೆಲ್ಲವುಗಳ ನಿರ್ಮಾಣ ಶಕ್ತಿಗೆ ತುಂಬ ಅವಕಾಶವಿರುವ ಲೋಕವದು. ಅನೇಕ ದೇಶದ ಸಂಸ್ಕೃತಿಗಳು, ಅವನ್ನು ಬೆಳೆಯಿಸಿಕೊಂಡು, ಬಳಸಿ ಕೊಂಡು ಮುಂದೆ ಬಂದಿರುವ ಬಗೆಯನ್ನು ಕಂಡರೆ—ನಮ್ಮ ನಾಡಿನವರು ಅಷ್ಟೊಂದು ಹೆಮ್ಮೆಪಡುವ ಸ್ಥಿತಿಯಿಲ್ಲ. ನಾವಿನ್ನೂ ಶೈಶವದಲ್ಲೇ ಇದ್ದೇವೆ-ಎಂಬ ಭಾವನೆ ನನಗಂತು ಉಂಟಾಗುತ್ತದೆ. ಅಂತಹ ಕೂಸೊಂದು—ತನ್ನ ಶಕ್ತಿಯನ್ನು ಉಪಯೋಗಿಸಿ ಎಷ್ಟು ನಲಿದಾಡಲು ಯತ್ನಿಸಿದೆಯೆಂಬು ದನ್ನು—ಈ ಕೆಲವೊಂದು ಕೃತಿಗಳು ತೋರಿಸಿಯಾವು. ಇವನ್ನು ಕೇವಲ ಪ್ರಯೋಗಳೆಂದು ತಿಳಿದೇ ನಾನಿದನ್ನು ಗ್ರಂಥರೂಪವಾಗಿ ಪ್ರಕಟಿಸುತ್ತಿ ದ್ದೇನೆಯೇ ಹೊರತು, ಇವು ಪಕ್ವ ಫಲಗಳೆಂದಲ್ಲ.

ಇದರಂತೆಯೇ ಬೇರೆ ಮಾದರಿಯಲ್ಲಿ ನಡೆಯಿಸಿದ ಕೆಲವು ಬಗೆಯು ನಾಟಕ ರೂಪಗಳನ್ನು ತಮ್ಮ ಮುಂದೆ ಇರಿಸಬೇಕೆಂಬ ಹಂಬಲವಿದೆ.

ಇತಿ,

ಪುತ್ತೂರು,
1—8—1946.

**ಶಿವರಾಮ ಕಾರಂತ.**

(ಅರಣ್ಯದಲ್ಲಿ ಭಗವಾನ್ ಬುದ್ಧ ದೇವನು ಆನಂದ ಮೊದಲಾದ ಶಿಷ್ಯರನ್ನು ಕೂಡಿ ಇದ್ದಾಗ ನಡೆದ ಘಟನೆಯಿದು.)

## ಪಾತ್ರ ವರ್ಗ:

**ಬುದ್ಧ**

**ಕಿಸಾ ಗೋತಮಿ**—ತನ್ನ ಮೃತ ಕೂಸಿಗಾಗಿ ಹಲುಬುತ್ತಿರುವ ಅಬಲೆ.

**ಆನಂದ**—ಬುದ್ಧನ ಮೆಚ್ಚಿನ ಶಿಷ್ಯ.

**ಸುಜಾತ**—ಇನ್ನೊಬ್ಬ ಶಿಷ್ಯ.

ಇಬ್ಬರು ಗೃಹಿಣಿಯರು.

---ooo---

## ಮೊದಲನೆಯ ದೃಶ್ಯ

[ರಾಗ -- ಮುಲ್ತಾನಿ]

**ಗೋತಮಿ:** ಹಗಲೆಲ್ಲ .... ಕತ್ತಲಾಯ್ತು
ಬಾಳೆಲ್ಲ .... ಬರಿದು ಆಯ್ತು
ಜಗವೆಲ್ಲ .... ಮಾಯವಾಯ್ತು
ಬೆಳಗಿಪರು ಯಾರದನು ?
ತೊಳಗಿಪರು ಯಾರದನು ?
ಮುಳುಗಿದೆನ್ನಯ ರವಿಯ ತೇಲಿಪರು ಯಾರು ?

(ಬುದ್ಧನ ಶಿಷ್ಯನಾದ ಆನಂದನು ಆ ಕಡೆ ಬರುತ್ತಾ ಈ ರೋದನವನ್ನು ಕೇಳಿ)

**ಆನಂದ:** ಯಾರು ಮರುಗುವರಿಲ್ಲಿ .... ಈ ಶಾಂತವನದಲ್ಲಿ,
ಬುದ್ಧನಿಹ ನೆಲೆಯಲ್ಲಿ ! .... ತಿಳಿವಿನಾಗರದಲ್ಲಿ !

**ಗೋತಮಿ:** ಕಂಡಿಹಿರಾ ಕಂದನನು ?
ಕೊಡಿಸುವಿರಾ ಬದುಕನ್ನು ?
ಜೀವನದ ಬೆಳಕನ್ನು.

**ಆನಂದ:** ಕಾಣುವುದೆ ಕಂದನನು ?
ಕೈಯೊಳಿಹನೆಲೆ ತಾಯಿ.
ಕೊಡಿಸುವುದೇ ಬದುಕನ್ನು ?
ಯಾರು ಕಳೆದರು ತಾಯಿ ?
ಜೀವನದ ಬೆಳಕೇನು ! ತಾವೇ ಕಾಣಲು ಬೇಕು.

**ಗೋತಮಿ:** ಅಣಕಿಪೆಯಾ .... ನೀ .... .... !
ಅಣಕಿಪೆಯಾ .... ನೀನ್ .... ಅಣಕಿಪೆಯಾ
ಕಂದನನು ಕಳೆದಿರುವ ಮಂದಭಾಗ್ಯಳ ಕಂಡು,
ಅಣಕಿಪೆಯಾ

ನಗುವು ತೋರದು ಕೂಸು
ವನಿಯನೆತ್ತದು ಕೂಸು
ಎದೆಯ ತಬ್ಬದು ಕೂಸು ....
ಅದಕಂಡು .... ಅಣಕಿಪೆಯಾ ?

[ರಾಗ—ದೇಸಕಾರ್]

**ಆನಂದ:** ತಾಯಿ .... ತಾಯಿ .... ಅರಿಯೆ ತವಪರಿಯ;
ಕೂಸು ಗತಿಸಿಹುದೇನು ? ತಾಯಿ, ತಾಯಿ,
ಅರಿಯದಿಹೆನೋ! ತಾಯಿ,
ಕಳೆದ ದಿನವೂ .... ಮರಳಲುಂಟೆ ?
ತಾಯಿ,
ಬಾಡಿದರಳು .... ತೆರೆಯಲುಂಟೆ ?
ತಾಯಿ,
ಸರಿದ ಬಾಳ್ವೆ .... ಬರಲು ಉಂಟೆ ?

**ಗೋತಮಿ:** ಅಸುವ ಪಿಡಿಯುವೆನೆಂತು
ಶಿಶುವು ಅಗಲಿರಲೆನ್ನ !
ಹಸಿರು ಕಳೆದಿರಲೆಂತು
ಹೊಲಕೆ ಸಿಂಗರ, ಬಣ್ಣ ?
ಹರಸು ತಂದೆ ....
'ಕೂಸು ಬಾಳಲಿ' ಎಂದು
'ಬಾಳ್ವೆ ಬೆಳಗಲಿ' ಎಂದು
ತೋಳೋಳ್ನಲಿಯಲಿ ಎಂದು
'ಹಾಲನೂಡಲಿ' ಎಂದು ಹರಸು ತಂದೆ.

(ರಾಗ—ಹೋರಿ ಕಾಫಿ)

**ಆನಂದ:** ನಾನ್ಯಾರು, ಹರಸುವೊಡೆ, ನಾನ್ಯಾರು ?
ನಿನ್ನಂತೆ ಅರಿಯದನು;
ಸಂಸಾರ ಜಾಲದಿಂ
ಪಾರಾಗಲೆಳಸುವನು.
ಬಾ — ತಂಗಿ, ಬುದ್ಧದೇವನ ಎಡೆಗೆ

ಸಿದ್ಧಜೀವನ ಎಡೆಗೆ.

ಬಾ — ತಂಗೀ,

ನಾನ್ಯಾರು, ಹೆರಸುವೊಡೆ!

**ಗೋತಮಿ:** ಬದುಕಿಪನೇ ಈ ಕೂಸ ?

**ಆನಂದ:** ಬದುಕಿಸಲು ಬಹುದಮ್ಮ

**ಗೋತಮಿ:** ನಲಿಸುವನೇ ಈ ಕೂಸ ?

**ಆನಂದ:** ನಲಿಸಲೂ ಬಹುದಮ್ಮ

**ಗೋತಮಿ:** ನಗಿಸುವನೇ ಈ ಕೂಸ ?

**ಆನಂದ:** ನಗಿಸಲೂ ಬಹುದಮ್ಮಾ

ಬಾ .... ತಂಗೀ .... —

## ಎರಡನೆಯ ದೃಶ್ಯ

(ವನದಲ್ಲಿ ಬುದ್ಧದೇವನು ಯಾರನ್ನೋ ಕಾದು ನಿಂತಿದ್ದಾನೆ)

(ರಾಗ—ಕಾಪೋದ)

**ಬುದ್ಧ:** ಆನಂದನೆಲ್ಲಿ, ಸುಜಾತ?
ಆನಂದನೆಲ್ಲಿ, ಸುಜಾತ ?

**ಸುಜಾತ:** ಗುರುದೇವ, ಕರೆದಿಹಿರ ?

**ಬುದ್ಧ:** ಆನಂದನೆಲ್ಲಿ ಸುಜಾತ ?

**ಸುಜಾತ:** ಕಂದಮೂಲವ ತರಲು ಅಂದೆ ಪೋಗಿಹೆನಲ್ಲ
ಕಂದ .... ಇವನಿಹೆನಲ್ಲ
ಬಂದನಲ್ಲ.

(ಅಷ್ಟಕ್ಕೆ ಕಿಸಾ ಗೋತಮಿಯೊಡಗೂಡಿ ಆನಂದ ಬರುತ್ತಾನೆ)

**ಬುದ್ಧ:** ಆನಂದ !

**ಆನಂದ:** ವಂದಿಪೆನಿದೋ .... ದೇವಾ

**ಬುದ್ಧ:** ಆನಂದ, ಜಗದ ನಿಜವನು ಅರಿವುದಾನಂದ.

**ಆನಂದ:** ಅಹುದೊಡೆಯ,

**ಬುದ್ಧ:** ಜೀವದಯೆಯಿಂದೆಲ್ಲ ಆನಂದ

**ಆನಂದ:** ಅಹುದೊಡೆಯ,

**ಬುದ್ಧ:** ಮಾಯೆ ಕಳಚುವುದೊಂದು ಆನಂದ.
**ಆನಂದ:** ಅಹುದೊಡೆಯ.
**ಬುದ್ಧ:** ಆನಂದ, .... ಆನಂದ .... ಮರುಗು ಏನು ?
ಮಾತಿನೊಳಗಹುದೆಂಬೆ, ಮನದಿ ಸಂಶಯವಿಹುದು !
**ಆನಂದ:** ಸಂಶಯವು ಕಳೆದಿಹುದು.
**ಬುದ್ಧ:** ಕಳೆಯೆ ಕಾಣದು ಮುಖದಿ,
ದುಗುಡವೇನು ?
ಸಂದೇಹ, ಸಂತಾಪದೊಳು ಮುಳುಗಿದಂತಿಹುದು
ಹೊಸತು ಏನು ?
ಆನಂದ — ಸಂದೇಹ ?
**ಆನಂದ:** ಎನಗಿಲ್ಲ.
**ಬುದ್ಧ:** ಸಂತಾಪ .... ?
**ಆನಂದ:** ಎನಗಿಲ್ಲ, ಈ ತಾಯ ದುಗುಡವನೆಲ್ಲ
ಹೊತ್ತು ಬಂದಿಹೆನಲ್ಲ
ಬಾ — ತಾಯೆ, ಎರಗು ತಂದೆಯ ಅಡಿಗೆ;
ದುಗುಡವೇನದು ಅರುಹು,
ಕಳೆಯುವನು ಈ ತಂದೆ.
ಕತ್ತಲಿಗೆ ಚಂದ್ರಮನು
ಮಬ್ಬಿಂಗೆ ಹೊಳೆರವಿಯು
ನೊಂದರ್ಗೆ ಅಮೃತವ ಉಣಿಸು.

[ ರಾಗ—ಮಾಂಡ್ ]

**ಬುದ್ಧ:** ಏನ್ — ತಾಯೆ ?
ಕರದಿ ಪಿಡಿದುದು ಏನು ?
ಮನವ ಬಾಧಿಪುದೇನು ?
ಮನದಿ ತೊಳಲುವೆಯೇನು ?
ಆನಂದನಂದುದೇನು ? ನೀನಿಲ್ಲಿ ಬಂದೆಯೇನು ?
**ಗೋತಮಿ:** ಸಲಿಸುವೆಯಾದರೆ ಪೇಳುವೆ ತಂದೆ.
ಕಳವಳಿಪುದು ಈ ಜೀವನ; ಬೆಂದೆ !

ಬೇಡಿದೆ ಎಲ್ಲರ !
ಕಾಡಿದೆ ಎಲ್ಲರ !
ಕೊಡಿಸುವೆಯಾದರೆ ಪೇಳುವೆ ತಂದೆ;
ಸಲಿಸುವೆಯಾದರೆ ಪೇಳುವೆ ತಂದೆ

**ಬುದ್ಧ:** ಪೇಳೆಲೊ ತಾಯಿ, ಪೇಳ್, ಪೇಳ್, ಅದೇನೆಂಬೆ.

**ಗೋತಮಿ:** ಸಲಿಸುವೆಯಾದರೆ ಪೇಳುವೆ ತಂದೆ

**ಬುದ್ಧ:** ಶಕ್ತಿಯೊಳಿದ್ದರೆ ಸಲಿಸುವೆ....ಎಂದೆ.

**ಆನಂದ:** ದೇವಗೆ ಸಲ್ಲದು ಯಾವುದು, ಎಂಬೆ !
ತಂಗಿ, ಜವದೊಳು ಪೇಳ್, ಪೇಳ್, ಎಂದೆ !

**ಗೋತಮಿ:** ಕೊಡಿಸುವೆಯ .... ಕಂದನನು ?
ನಲಿಸುವೆಯ .... ಚಂದಿರನ ?
ಬೆಳಗುವೆಯ .... ಬಾಂದಳವ ?
ತೊಳಗುವೆಯ .... ಜೀವಿತವ ?
ಒಂದೇ ಕೂಸಿದು, ಚಿನ್ನ,
ಬಂದು ನಲಿಸಿತು ಎನ್ನ,
ನಕ್ಕು ನಗಿಸಿತು ಮನವ,
ಬೆರಗುಗೊಳಿಸಿತು ದಿನವ
ಈ ಬೆಳಗು ಕಡು ಕ್ರೂ .... ರ !
ನಿದ್ದೆ ಕವಿದಿದೆ ಶಿಶುಗೆ .... ಪೋಗದದು ದೂರ;
ಮೊಗಕೆ ಸೊಗವದು ಬಾರ
ಎದೆಗೆ .... ಬೆಚ್ಚನೆ .... ತೋರ ....
ಕೊಡಿಸುವೆಯಾ ಕಂದನನು ?
ನಲಿಸುವೆಯಾ ಚಂದಿರನ ?

**ಬುದ್ಧ:** ಕಂದನನು ಇರಿಸಿಲ್ಲಿ;
ಮದ್ದೊಂದ ಪೇಳುವೆನು

**ಗೋತಮಿ:** ಏನು ಬೇಕದು ಪೇಳು .... ಪೇಳು.

**ಬುದ್ಧ:** ಪೇಳುವೆನು, ತರುವೆ ಏನ್ ? ........ ಎಂದೆ.

**ಗೋತಮಿ:** ತರುವೆನೆಂದೆ .... ನಾ ........ ತರುವೆನೆಂದೆ;

**ಬುದ್ಧ:** ಸಾವು ಕಾಣದ ಮನೆಯ
ಸಾಸಿವೆಯ ತಾರವ್ವ.

**ಗೋತಮಿ:** ಇಷ್ಟು ಸುಲಭದ ಮದ್ದೆ .... ? ತರುವೆನೆಂದೆ.
'ಸಾವು ಕಾಣದ ಮನೆಯ ............ ಸಾಸಿವೆಯು' ಬೇಕೆ ?

**ಆನಂದ:** ಪೇಳಲಿಲ್ಲವೆ ತಾಯಿ ........ ದೇವ ದೊಡ್ಡವನೆಂದು
ಬೇಗ ತಾ .... ಸಾಸಿವೆಯ, ಸಾಗಿ ತಾ .... ಸಾಸಿವೆಯ.

**ಗೋತಮಿ:** ಈಗ ತಂದೆ. ನಾನೀಗ ಬಂದೆ ಈಗ ಬಂದೆ.

## ಮೂರನೆಯ ದೃಶ್ಯ

(ಬೀದಿಯಲ್ಲಿ ಸಾಸಿವೆಗಾಗಿ ಅಲೆದಾಡುತ್ತ)

(ರಾಗ—ಬಿಭಾಸ್)

**ಗೋತಮಿ:** ಸಾಸಿವೆಯು ಬೇಕೆನಗೆ, ಸಾಸಿವೆಯು ಬೇಕು
ಓ .... ತಾಯಿ, ಮಾ .... ತಾಯಿ,
ಬಂಧುಗಳೆ, ಬಾಂಧವರೆ,
ಕಂದನನು ಬದುಕಿಪರೆ ಸಾಸಿವೆಯು ಬೇಕು.

**೧ನೇ ಮನೆಯಾಕೆ:** ಯಾರು ನೀ ಪೇಳವ್ವ
ಅಪರಾತ್ರಿಯೊಳು ಕರೆವೆ !
ಕೊರಗು, ಕೂಗಿದು ಏನು
ಬೇಕು — ನಿನಗೇನು ?

**ಗೋತಮಿ:** ಸಾಸಿವೆಯು ಬೇಕೆನಗೆ; ಸಾಸಿವೆಯು ಬೇಕು

**೧ನೇ ಮನೆಯಾಕೆ:** ಮುಂದೆ ನೀ ಅಳಬೇಡೆ;
ತಂದು ನೀಡುವೆನದನ

**ಗೋತಮಿ:** ಸಾಸಿವೆಯ, ತಾಯಿ !
ಸಾಸಿವೆಯು ಇಹುದೇನು ?
ತಂದು ನೀಡುವಿರೇನು ?
ಕಂದನುಳಿದನು ನಿಜದಿ
ನಿಮ್ಮ ದಯದಿ.

**೧ನೇ ಮನೆಯಾಕೆ:** ಬರಿಯ ಸಾಸಿವೆಯಷ್ಟೆ ?

**ಗೋತಮಿ:** ಬರಿಯ ಸಾಸಿವೆ ಸಾಕು:
ಸಾವು ಕಾಣದ ಮನೆಯ ಬರಿಯ ಸಾಸಿವೆ ಸಾಕು

**೧ನೇ ಮನೆಯಾಕೆ:** ಸಾವು ಕಾಣದ ಮನೆಯೆ !
ಇಂದಲ್ಲ .... .... ಹಿಂದಿತ್ತು.
ಒಂದು ತಿಂಗಳ ಹಿಂದೆ ಗತಿಸಿದಳು ಕಿರಿತಂಗಿ;
ಇಂದಿಗೂ ದುಃಖದಲಿ ಮರುಗುತಿಹೆನು

**ಗೋತಮಿ:** ಒಂದೆ ಮಾತೆಲ್ಲರಿಗೆ, ಎಲ್ಲರೆಂಬುದು ಇಂತೆ,
ಮುಂದೆ ದೊರೆವುದೊ ಏನೋ
'ಸಾಸಿವೆಯು ಬೇಕೆನಗೆ ಸಾಸಿವೆಯು ಬೇಕು'
ಸಾವು ಕಾಣದ ಮನೆಯ .... .... ....

(ಇನ್ನೊಬ್ಬಳು ಕೇಳಿ ಬರುತ್ತ)

**೨ನೇ ಮನೆಯಾಕೆ:** ಸಾಸಿವೆಯು ಬೇಕೇನು, ಅದಕೆ ಏತಕೆ ಕೂಗು ?
ಕೊಡರೆ ಕರೆದೊಡೆ ಬರಿದೆ !

**ಗೋತಮಿ:** ಮದ್ದುಗೈಯಲು ಬೇಕು,
ಮುದ್ದು ಕೂಸನು ಉಳಿಸೆ

**೨ನೇ ಮನೆಯಾಕೆ:** ತರುವೆ .... ನಿಲ್ .... ಎಲೆ ತಾಯಿ,

**ಗೋತಮಿ:** ಸಾವು ಕಾಣದ ಮನೆಯ ಸಾಸಿವೆಯು ಬೇಕು

**೨ನೇ ಮನೆಯಾಕೆ:** 'ಸಾವು ಕಾಣದ ಮನೆಯೆ' ?
ಮನೆಯ ಕಟ್ಟಿದ ಅಂದೆ
ಮೃತನು ಆದನು ತಂದೆ.
ನಾಲ್ಕು ದಿನಗಳ ಹಿಂದೆ
ನಲ್ಲ ಸರಿದನು ಜವನ ಹಿಂದೆ.
ಸಾಸಿವೆಯ ನೆವದಿಂದ
ನೊಂದವರ ಅಣಕಿಪುದೆ!
ನಡೆ ತಾಯಿ .... ಬಿಡು ತಾಯಿ

**ಗೋತಮಿ:** ಏನು ಗತಿ ಇದು ಬಂತು !
ಎಲ್ಲಿ ನೋಡಿದಡಲ್ಲಿ ಒಂದೆ ನೋವಿನ ಶೂಲ
ಅದುವೆ ಸಾವಿನ ಜಾಲ

ಸಾಸಿವೆಯು ಇನ್ನೆಲ್ಲಿ !
ಸಾಸಿವೆಯು ಇನ್ನೆಲ್ಲಿ.
(ಬುದ್ಧ ದೇವನು ಕುಳಿತ ವನಕ್ಕೆ ತಿರುಗಿ ಬರುವಳು)

## ನಾಲ್ಕನೆಯ ದೃಶ್ಯ

[ ರಾಗ — ಭೈರವಿ ]

**ಬುದ್ಧ :** ನೀ .... .... ಬಂದೆಯೇನು .... .... !
ನೀ .... .... ತಂದೆಯೇನು .... .... ?
ಸಾವು ಕಾಣದ ಮನೆಯ ಸಾಸಿವೆಯ ಕಾಳನ್ನು .... ,
ನೀ ತಂದೇಯೇನು .... ?
ನೀ ಬಂದೇಯೇನು .... ?

**ಗೋತಮಿ:** ಸಾಸಿವೆಯ ಕಾಳಿಲ್ಲ.
ಸಾವಿಲ್ಲದೆಡೆಯಿಲ್ಲ
ಬದುಕಿಸುವ ಗತಿಯಿಲ್ಲ.

**ಬುದ್ಧ :** ಸಾಸಿವೆಯ ಕಾಳಿಲ್ಲ ?

**ಗೋತಮಿ:** ಸಾಸಿವೆಯು ಇಹುದಂತೆ, ಸಾವಿಲ್ಲದೆಡೆಯಿಲ್ಲ !
ಅಲ್ಲಿ ತಂದೆಯ ಮರಣ;
ಇಲ್ಲಿ ತಂಗಿಯ ಸಾವು;
ಮತ್ತೆ ನಲ್ಲನ ಕೊನೆಯು;
ಸುತ್ತ ಇಲ್ಲದ ನೋವು.
ಎಲ್ಲ ಮೂಲೆಯೊಳ್, ತಂದೆ,
ಸಾವಿನಾಟವು ಒಂದೆ.

**ಬುದ್ಧ :** ಸಾವಿಲ್ಲದೆಡೆಯಿಲ್ಲ — ನೋವಿಲ್ಲದೆಡೆ ಇಲ್ಲ
ಸಾವು ಜೀವಕೆ ನಂಟು, ಅದನ್ನು ತಪ್ಪಿಸ ಸಲ್ಲ.
ಸಾವಿನೊಳು ಮರುಗದಿರು
ಜೀವದೊಳು ಹಿಗ್ಗದಿರು.
ಕನಸಿಗಾಗಳುತಿರುವೆ, ಇದುವೆ ಘನವೆ ?
ಎಲ್ಲ ಕನಸಿನ ಆಟ — ನಿನ್ನ ಕೂಸಿನ ಬೇಟ;

ಅಷ್ಟಸುಳ್ಳಿನ ಆಟ — ಈ ಸಾವಿನಾಟ !
ಅದಕೆ ಮೋಹವೆ ಪೇಳು, ಅದಕೆ ಕೊರಗೇ, ಪೇಳು!

**ಗೌತಮಿ:** ಮಂಕಿನೊಳಗಾಡಿದ್ದೆ. ಕೂಸು ನನ್ನದು ಎಂದೆ—!
ಯಾರೊ ಕೊಟ್ಟರು ಅದನು !
ಯಾರೊ ಕಿತ್ತರು ಅದನು !
ಅದಕೇಕೆ ಆ ಹಿಗ್ಗು, ಈಗೇಕೆ ಈ ಕುಗ್ಗು ?
ಕನಸಿಗಾಗಳಲಾರೆ. ಶವವ ಮರೆಮಾಡುತಲಿ
ಕನಸ ಮರೆಯುವೆ ತಂದೆ.

**ಬುದ್ಧ:** ತಿಳಿವಿನೊಳು .. ಸೀ .... ಬದುಕು ಮುಂದೆ.
ತಿಳಿಸಿನೊಳು .. ಸೀ .... ಬದುಕು ಮುಂದೆ



[ಈ ಕಥಾನಕ ದಕ್ಷಿಣ ಕನ್ನಡದ ಹೊಲೆಯರ ಸಂಗಡವೊಂದನ್ನು ಚಿತ್ರಿಸುತ್ತದೆ. ಹಾಡುಗಳ ಸರಣಿಯು ಮೊದಲಿಗೆ ಉತ್ತರ ಕರ್ಣಾಟಕದ ಲಾವಣಿಯ ಮಾದರಿಯದು. ಮುಂದೆಲ್ಲ ತುಳು ಜಾನಪದ ಗೀತಗಳ ರೀತಿಯವು.]

## ಪಾತ್ರ ವರ್ಗ:

**ಚನಿಯ**—ಗುರುವನೆಂಬ ಹೊಲೆಯನು ಸಾಕಿದ ಹುಡುಗ.

**ಸೋಮಿ**--ಗುರುವನ ಮಗಳು.

**ಗುರುವ**—ಒಬ್ಬ ಹೊಲೆಯ, ಹೆಂಡತಿಯಾದ ತಿಮ್ಮಿಯನ್ನು ಕಳೆದುಕೊಂಡವ.

**ನರಸ**— ಇನ್ನೊಂದು ಕುಲದವ ಐತನ ತಂದೆ.

**ಐತ**— ನರಸನ ಮಗ, ಸೋಮಿಯನ್ನು ಲಗ್ನವಾಗುತ್ತಾನೆ.

**ಹಿಮ್ಮೇಳ**--ಇದರಲ್ಲೆರಡು ಸಂಗಡ; ಹಾಡು ಹೇಳುವವರು, ಪಲ್ಲವಿ ಮಾತ್ರ ಹಾಡುವವರು.



(ಮೇಳದವರು, ನಟರು ರಂಗಮಂಟಪದಲ್ಲೇ ಇರುವರು. ಮೇಳಕ್ಕೆ ಡಮರು ಚರ್ಮವಾದ್ಯ. ನಟರು ತಂತಮ್ಮ ಭಾಗ ಬಂದಾಗ ಹಾಡಿ, ನರ್ತಿಸುವುದು ರೀತಿ.)

**ಮೇಳ**—ಕಾಡೀಗಿ ಬಣ್ಣದ ಹುಡುಗಿಯು ಅವಳು || ಪ ||
ಕಾಡಿಗಿ ಬಣ್ಣದ ಹುಡುಗಿಯು ಅವಳು
ಕಾಡಿನ ಬದೀಲಿ ಬೆಳೆದು ಬಂದವಳು
ಕೂಸಾಳು ಗುರ್ವಗೆ ಒಬ್ಬಳೆ ಮಗಳು
ತುಂಬಿಯ ಕಣ್ಣಿಗೆ ಗುಂಗುರು ಹೆರಳು || ೧ ||
ಆಡಿನ ಮರಿಯಂಥ ಜಿಗಿನೆಗೆದಾಟ
ನೀಲದ ಗೊಂಬಿಯು, ಚೆಲ್ವಿನ ಮಾಟ
ತೇಲುತವಾಲುತ ಹೋಗುವ ನೋಟ
ಬರ್ಮನ ಇಚ್ಚೆಗು ಮೀರಿದದೃಷ್ಟ || ೨ ||
ಕುಲಕೇನು ಕಮ್ಮಿ ಈ ನಮ್ಮ ಸೋಮಿ
ಗುರ್ವಣ್ಣ ಅಪ್ಪ, ಅಬ್ಬೆಯು ತಿಮ್ಮಿ
ಮಾನಮರ್ವಾದಿಗೆ ಪಿರಾಣ ಕಮ್ಮಿ
ಧನೀರು 'ಹೂಂ' ಎಂದ್ರೆ ನೆಗ್ದಾರು ಚಿಮ್ಮಿ || ೩ ||

[ಇಲ್ಲಿ ಪಲ್ಲವಿಯು ಮೃದುಗತಿಯಿಂದಲೂ ಹಾಡುಗಳು ಸಮಗತಿಯಿಂದಲೂ ಸಾಗುವುವು.]

**ಮೇಳ**—[ತಾರಕದಲ್ಲಿ ತೀವ್ರಗತಿಯಿಂದ ಹಾಡು ಸಾಗುವುದು; ಪಲ್ಲವಿಯು ಸಮಗತಿಯಿಂದ.]

ಬನ್ನೇರು ಗುಡ್ಡೆಯ ಕೊಪ್ಪದಿ ಗುರ್ವಣ್ಣ
ತನ್ನಪ್ಪ ಮುತ್ತಜ್ಜ ಹುಟ್ಟಿದ ಗುಡೀಲಿ
ಚೆನ್ನಿತಿಮ್ಮಕ್ಕನ ಕೂಡಿ ಬಾಳ್ವೆಯಮಾಡಿ
ಕೂಡೇಲ ದೇವರಿಗೊಪ್ಪುವಂತಿದ್ದ.
ಚೊಚ್ಚಲು ಹಸುಗೂಸು ಸೋಮಿಗೆ ಸಂದಿತು
ಐದು ಕೆಡ್ಡಾಸವು ಕಣ್ಮುಚ್ಚಿ ತೆರೆವಾಗ
ನೆಚ್ಚಿದ ಹೊಲ್ತಿಯ ಪಂಜುರ್ಲಿ ಕೊಂಡೋಯ್ತು
ಮುಗಿತಂದು ಸೋಮಿಗೆ ಹೆತ್ತಬ್ಬೆಋಣವೂ || ೧ ||

**ಗುರ್ವ**— ಸೋಮಿ ಸೊಮಿ,
ಅಳಬೇಡ ಚಿನ್ನಿ
ಇನ್ನೊಂದು ಮದುವ್ಯಾಗೆ
ನಿನಗಾಗಿ ಹೊನ್ನಿ || ಪಲ್ಲವಿ ||

**ಮೇಳ**—ಹೊಲ್ತಿಯು ಹೋಗಿಂದು ಹತ್ತು ಅಮಾಸಿ
ಅವನೆದೆ ಕಡಿವುದು ದುಃಖಕ್ ತಮಾಸಿ!
ಆವರು ನುಂಗುತೆ ಸಂಕ್ಟದ ಸಂತೆಯ
ಸೋಮಿಯ ಮುಂದಕೆ ನಗ್ತಾಲೆ ಇರುವ.
ಕಾಗಿಯ ಬಣ್ಣದ ಮುಗಿಲದು ಬಸಿರಾಗಿ
ಮಿಂಚಿನ ಬಳ್ಳಿಯ ಹೆರಲಾರದೇನು ?
ಆಟಕ್ಕೊ ನೋಟಕ್ಕೊ, ತಿಂಡಿಗೊ ತೀನಿಗೊ
ಸೋಮಿಯ ಕೆನ್ನೆಯು ಚಂಡಿಯಾಗಿಲ್ಲ || ೨ ||

**ಗುರ್ವ**— (ಪಲ್ಲವಿ)

**ಮೇಳ**—ಆರಾಗಿ ಏಳಾಯ್ತು ಎಂಟು ಮತ್ತೆರಡು
ಹಳ್ಳದ ನೀರಂತೆ ಹರಿಯಿತು ವರ್ಸ
ಕೂಸಿಂಗೆ ಬೇಸರ ಬರಬಾರದೆಂದು
ಎಲ್ಲೋದ್ರು ಅಲ್ಲವಳ ಕೊಂಡೊಯ್ಯುತಿದ್ದ
ಸಟ್ಟಿಗೆ ಹೋಗಲಿ, ಕೊಯ್ಲೀ ಇರಲಿ
ನೆಂಟರ ಮನೆಯೊಳಗೆ ಹಬ್ಬಾನೆ ಇರಲಿ
ಬಿಟ್ಟೇಕೆ ಎಂದೆಂದು ಹೋದವ್ನೆ ಅಲ್ಲ
ಇಬ್ರ ಹೊಟ್ಟೆಗು ಬೆನ್ನಿಗು ಒಂದೇ ಚರ್ಮ || ೩ ||

**ಗುರ್ವ**— (ಪಲ್ಲವಿ)

**ಮೇಳ**—ಅನ್ನದ ಅಗಳ್ಕಾಣ್ದೆ ಮುಸ್ಸಂಜೆಯಾದರು
ಸೋಮಿಯ ಮುಂದಕೆ ನಗದವನಲ್ಲ
ತನ್ಹೊಟ್ಟೆ ತಂಪಾಗ್ದೆ ವಾರವೊಂದಾದರು
ಬಾಲೆಯ ಹೊಟ್ಟೆಯು ಬಳಲಿಸಲಿಲ್ಲ.
ಯಾರೆಲ್ಲ ಅಂದಿಲ್ಲ ಗುರ್ವನ ಕರೆಕರೆದು
'ಇನ್ನೊಂದುಮದುವ್ಯಾಗು, ಬೆಳಲಿಲ್ಲವೆ ಮಗಳು !'

ಹಗಲೆಲ್ಲ ಹೊತ್ತೀಗೆಯ ಕುದ್ರೀಯೆ ಏನ್ ನೀನು
ಮಲತಾಯಿ ಎಂಬುದು ರಕ್ಕಸಿಯೇನು?' ॥ ೪ ॥

ಗುರ್ಶ— (ಪಲ್ಲವಿ)

ಮೇಳ—ಯಾರೇನು ಅಂದರು ಕುಡಿನಗು ನಗ್ತಿದ್ದ
ಇನ್ನೊಂದು ಸಂಬಂಧ ಕನವರಿಸಲಿಲ್ಲ.
ಸೋಮಿಯು ಬೆಳೆದಳು ಎಂಬುದು ಬಲ್ಲ
ಹೋದಲ್ಲಿಗೊಯ್ವುದು ಸಾಧ್ಯ ಇದ್ದಿಲ್ಲ.
ಇದಕ್ಕಾಗಿ ಒಂದಿನ ಅಪ್ಪಬ್ಬೆ ಇಲ್ಲದ
ಹೈದನ ಎಲ್ಲಿಂದೊ ಗುಡೀಗೆ ಕರ್ತಂದ
'ಹೈದಾನ ಕೂಡಿ ಆಡ್ತಿರು ಸೋಮಿ
ಆಡೋದೆ ಮರೆತಿಯಾ ಇಲ್ವಾದ್ರೆ ರಾಮಿ' ॥ ೧ ॥

ಗುರ್ಶ— (ಪಲ್ಲವಿ)

(ಹಾಡು ತೀವ್ರಗತಿ—ಪಲ್ಲವಿ ಸಮಗತಿ)

ಮೇಳ—ಚನಿಯಗೆ ವರ್ಷ ಹನ್ನೆರಡು
ಸೋಮಿಗೆ ಹತ್ರಮೇಲೆ ಎರಡು,
ಗೆಳೆಯರು ನಮ್ಮೆರಡು ಚಿಗುರಿ
ಒಕ್ಕಾಲಮೇಲ್ಕುಣಿವ ಬುಗರಿ ॥ ಪ ॥
ದಿನಹತ್ತು ಹೋಯಿತು
ಚನಿಯ ಮನೀಗ್ಬಂದು
ಸೋಮಿಗೆ ಸೊರ್ಗೊಂದು
ಕೈಮೇಲ್ಕುಣಿದ್ಹಾಂಗಿತ್ತು ।
ಹತ್ರಂದ್ಯಾಗ ಕಲ್ತ್ಯಾಡು
ಹೆತ್ತೂರಾಗಿದ್ದಾಟ
ಒಂದೊಂದೆ ಗೆಳ್ತಿಗೆ
ಕಲ್ಸುತ್ತೆ ಬಂದಾನು ।
ಚಿಣಿಯಾಟ ಚಂಡಾಟ
ಜಿಬ್ಲಿ ಗಜ್ಜುಗದಾಟ
ಬೇಸರ್ಕೆ ಬರುಮುಂಚೆ

ಕಥೆ ಹೇಳುವಾಟ ।
ಅದು ಮುಗಿವುದರೊಳಗೆ
ಕಥೆಗೆದುರು ಕಥೆಯೊಡ್ಡಿ,
ಬಂಡಿಗೆ ಬಾಲಕೂಡ್ಸಿ,
ಹಿಂಗೆಲ್ಲಾ ಹೋಗ್ತಿತ್ತು ಗೆಳೆಯರ ಗಳಿಗೇ ॥ ೧ ॥
ಸೋಮಿಯ ಮದುವೀಯ
ನೆನಪೊಂದು ಹಾದರೆ
ತನ್ಜೀವ ಬದ್ಕೀತೆ
ಕೂಸನ್ನು ಬಿಟ್ಟು
ಆಯೊಚ್ನೆ ಹತ್ತಿಂದ್ರೆ
ವ್ಯೆ ಇಡಿ ಉರಿತಿತ್ತು
ನಡು ಹಗ್ಲಿನೊಳಗೂ
ಕತ್ತಲೆ ಕವಿತಿತ್ತು ।
ಇನ್ನೊಂದು ಗಳಿಗೆಗೆ
ಬೇರೊಂದೆ ಬುದ್ದಿಯು
ಏನಾರು ಆಕೊಳ್ಳಿ
ಮಗಳಾದ್ರೆ ಸುಖಿಯು ।
ತಾನ್ಯಾವ್ಯಾಂಗೂ ಸಾಯ್ಬಾಸ
ವರ್ಸಾಯ್ತು ನಾಲ್ಕತ್ತು
ಅವಳಾದ್ರೆ ಚಿಕ್ಕವ್ಳು
ಸುಖವಾಗಿ ಬದ್ಕಿದ್ರೆ ನೋಡಿ ಸಾಯ್ತಹುದು ॥ ೨ ॥
(ಪಲ್ಲವಿ)
ತಿಂಗ್ಳಾರು ಕಳೆತೀಗ
ಚನಿಯ ಮನೀಗ್ಬಂದು
'ಬಳಿ'ಯೊಳಗೆ ಬೆಳೆದಂತೆ
ಚಿಂತೆಂಬುದಿಲ್ಲ ।
ಆಟೂಟ ಆಡೂತ
ಸೋಮಿ ಚನಿಯರು ಕೂಡಿ

ಗೆಣೆತನಕೆ ಹೆಚ್ಚಿನ
ಎಣೆಯೆಂಬುದಿಲ್ಲ ।
ವರ್ಸಾಯ್ತು ಈಗೊಂಡು
ಮಂಕೇನೊ ಮಳೇನೊ
ಸೋಮಿ ಚನಿಯರ ಜೀವ
ಕಂಚಿನ ಎರಕ ।
ದಿನಗಳು ಹ್ಯಾಂಗೇನೋ
ಹಕ್ಕ್ಯಾಂಗೆ ಹಾರ್ತಾವೆ
ಇಬ್ಬರು ಕಾಂಬುಕೆ
ಗೂಡ್ಕಟ್ಟಿ ಬಂದಿಸ್ದ ಗುಬ್ಬಚ್ಚಿ ಹಾಂಗೆ || ೩ ||
(ಪಲ್ಲವಿ)
ಒಂದಿನ ಗುರ್ವಣ್ಣ
ಮಕ್ಕಳು ಇಬ್ಬರ
ಉರ್ಕಂದಿ ಮದ್ವಿಗೆ
ಜತೇಲಿ ಒಯ್ದ ।
ಮನಿಗ್ಬಂದು ಸೋಮಕ್ಕ
ಮದುವಣ್ಗಿ ಆಗ್ಯಾಳೆ,
ಕಾಡೀಗೆ ಕಣ್ಣಿಗೆ,
ತಲೆಗಿಟ್ಟು ಎಣ್ಣೆ ।
ಚನಿಯಪ್ಪ ಕಮ್ಮಿಯೆ!
ಮದ್ಮಗ ಅಲ್ಲೇನ?
ಹುರಿಹಗ್ಗದ ನೇವಳ
ನಡುವಿಗೆ ಬಿಗಿದ ।
ಸೋಮಿಗೆ ನಾಚೀಕೆ
ಚನಿಯಂಗೆ ಮಾತಿಲ್ಲ
ಆದರೂ ಆಟಕ್ಕೆ
ಬೇಕಷ್ಟು ಮದಿವ್ಯಾಗಿ ಸುಖಪಟ್ಟಾರೆ || ೪ ||
(ಪಲ್ಲವಿ)

ಇಬ್ಬರ ಮನಸಲ್ಲೂ
ಕನಸೀನ ಮದವೀಯು
ನೆನಸೊಳಗು ಉಳ್ಕೊಂಡು
ಮಾಯಾ ಹೆಣೆತು ।
ಸೋಮಿಗೆ ಮನೆವಾರ್ತೆ
ನೆಚ್ಚೀಗೆ ಕೆಲಸವು
ಚನಿಯಗೆ ಹೊರಗಿನ
ಕಜ್ಜ ಬದುಕುಗಳು ।
ಆಟದ ಗಂಡಂಗೆ
ಒಂದಿನ ಜ್ವರ ಬಂದ್ರೆ
ಸೋಮಿಯ ಕಣ್ಣಲ್ಲಿ
ಹೊಳೆಹೊಳೆ ನೀರು ।
ಜ್ವರಬಿಟ್ಟ ಮದ್ದೀನ
ಇಬ್ಬರು ಸೇರ್ಕೊಂಡು
ಗುಳಿಗಂಗೆ ಮಣಿದಾರು
ಆರ್ಕಾಸ ಕಳ್ಳೀನ ಹೆರಕೆಯ ಹೊತ್ತು ॥ ೫ ॥

**ಮೇಳ**—ಚನಿಯಗೆ ವರ್ಷ ಹನ್ನಾರು
ಸೋಮಿಗೆ ಹತ್ರ ಮೇಲೆ ಆರು
ಮನಸಿನ ಮಂಡಿಗೆಯೊಳಗೆ
ನಿಜವನು ಮರೆದಿಹ ಗಳಿಗೆ ॥ ೬ ॥

**ಮೇಳ**—[ತಾರಕದಲ್ಲಿ]
ಹದಿನಾರು ವರ್ಷದ ಬಾಲೆ
ಹಲ್ಲೆಂದರೆ ಮಲ್ಲಿಗೆ ಜೊಲ್ಲೆ
ಕಣ್ಣಾಲಿ ಥಳಿಸು ಹೆದ್ದುಂಬೆ
ಕೆನ್ನೆ—ಉಬ್ಬಿದ ಗಜನಿಂಬೆ
ಪಾರ್ಜಾತ ಹೂವಿನ ಕಂಪು
ನಾಗ ಸಂಪಿಗೆಯಂಥ ರೂಪು

ಹಕ್ಕಿಯ ಗಂಟಲ ಇಂಪು
ಸೋಮಿಲಿ ಸೇರ್‍ಯಾವು ಸೊಂಪು

[ಮೃದುಗತಿಯಿಂದ]

ಸೋಮಿಯು—ಈಗ—ಅಂಥವಳು
ಗುರ್‍ವನ—ಮುದ್ದಿನ—ಮಗಳು

ಮೇಳ— ಗುರ್‍ವನ ಗುಡೀಗೆ
ನಂಟ್ರು ಬಂದಾರು (ಪೂರ್ವಾರ್ಧ)

ಗುರ್‍ವ— ಓ ಸೋಮಿ ಬಾರೆ
ಸಮ್ಮಾನ ಮಾಡ್ಮಗ || (ಉತ್ತರಾರ್ಧ)

ಮೇಳ— (ಪೂರ್ವಾರ್ಧ)

ಗುರ್‍ವ— ಓ ಸೋಮಿ ಬಾರೆ
ಎಸರು ಇಡ್ಮಗಾ ||

ಮೇಳ— (ಪೂರ್ವಾರ್ಧ)

ಗುರ್‍ವ— ಎಲ್ಲಿಂದ ಬಂದ್ರಪ್ಪ
ಯಾಕೆ ಬರ್‍ತಾರೊ ||

ಮೇಳ— (ಪೂರ್ವಾರ್ಧ)

ಗುರ್‍ವ— ಇಷ್ಟು ದಿನ ಯಾರಿಲ್ಲ
ಈಗ ಯಾಕಪ್ಪ ||

ಮೇಳ— (ಪೂರ್ವಾರ್ಧ)

ಗುರ್‍ವ— ಅಲ್ಕಾಣು ಸೋಮಿ
ಇನ್ನು ಬರ್‍ತಾರೆ ||

ಚನಿಯ— ಎಲ್ಲಿಲ್ಲವವರೂ
ಯಾಕೆ ಬರ್‍ತಾರೋ— (ಪೂರ್ವಾರ್ಧ)

ಸೋಮಿ— ಹೌದಂತೆ ಚನಿಯ
ಬಹಳ ಬರ್‍ತಾರೆ

ಚನಿಯ— (ಪೂರ್ವಾರ್ಧ)

ಸೋಮಿ— ನನ್ನನ್ನೆ ಕಾಣ್ತಾರೆ
ದಿಟ್ಟ ಬಿಡ್ತಾರೆ

**ಚನಿಯ**—(ಪೂರ್ವಾರ್ಧ)

**ಸೋಮಿ**—ಅಷ್ಟೊಂದು ಬಂದವರು
ಮೂಕರೇನಪ್ಪ

**ಚನಿಯ**—(ಪೂರ್ವಾರ್ಧ)

**ಸೋಮಿ**—ಆ ಮೊನ್ನೆ ಬಂದಾತ
ಹುಬ್ಬು ಹಾರ್ಸಿದ

**ಚನಿಯ**—(ಪೂರ್ವಾರ್ಧ)

**ಸೋಮಿ**—ಆ ನಿನ್ನೆ ಹೋದವ
ಮಗುಳು ನಗುತ್ತಿದ್ದ

**ಚನಿಯ**—(ಪೂರ್ವಾರ್ಧ)

**ಗುರ್ನ**— ನಂಗ ತಿಳಿತೂ
ನಿನ್ನ ಕಾಂಬೋಕೆ.
ನೀಮದ್ವಿ ನೆರೆದಿದ್ದಿ
ಕಾಣ್ಲಿಕ್ಕೆ ಬಂದಾರೆ

**ಸೋಮಿ**—ನನ್ನ ತಳ್ಬೇಡಾ
ಗುಡಿಯ ಹೊರಗಂಟೆ
ಆ ಮದ್ವೀನೆ ಬ್ಯಾಡಪ್ಪ
ಮನೆಯ ಬಿಡ್ಲಾರೆ

**ಗುರ್ನ**— ಹಾಂಗನ್ಬೇಡಾ
ನನ್ನ ಹೆಂಗರು
ನೀ ಹೆಣ್ಣು ಆದ್ಮೇಲೆ
ಮದ್ವಿ ಬ್ಯಾಡೇನೆ?

**ಸೋಮಿ**—ಮದ್ವಿ ಬ್ಯಾಡಪ್ಪ
ನಾ ಗುಡಿಯ ಬಿಡ್ಲಾರೆ
ನಿನ್ನನ್ನು ಬಿಟ್ಟರೆ
ಪ್ರಾಣ ಹಾರೀತು.

**ಗುರ್ನ**— ಹಾಂಗನ್ಬೇಡಾ
ಗುಂಗುರು ಕೂದಲವಳೇ

ನನ್ನ ಕೂದ್ಲು ನೆರೆಲಿಲ್ವ
ಜೀವ ಶಾಸ್ವತವಾ

**ಮೇಳ**— ಮಾತು ಎಲ್ಲಾವಾ
ಚನಿಯ ಕೇಳ್ಯಾನು (ಪೂರ್ವಾರ್ಧ)

**ಚನಿಯ**— ಆ ಸೋಮಿ ಬಿಟ್ಹೋದ್ರೆ
ಹ್ಯಾಂಗೆ ಬದಕ್ಕ್ಯೇನು

**ಮೇಳ**— (ಪೂರ್ವಾರ್ಧ)

**ಚನಿಯ**— ನನ್ನಾಟದ ಹೆಂಡ್ತಿಯು
ಹಾರಿಹೋಗ್ತಾಳೋ!

**ಮೇಳ**— (ಪೂರ್ವಾರ್ಧ)

**ಚನಿಯ**— ನನ್ಯಾಕೆ ತಂದಾರು
ಬೆಳೆಸಿ ಬಂದಾರು.

**ಮೇಳ**— (ಪೂರ್ವಾರ್ಧ)

**ಚನಿಯ**— ಹಾದೀಲಿ ಸಾಯ್ತಿದ್ದೆ
ಗೋಳು ತಪ್ತಿತ್ತು

**ಮೇಳ**— (ಪೂರ್ವಾರ್ಧ)

**ಚನಿಯ**— ಆ ಸೋಮಿ ಹೋದ್ಮೇಲೆ
ಬದುಕು ಉಳ್ದೀತಾ.

**ಮೇಳ**— ಸನಿಯಾರ ಒಂದು ಬಂತು ನೋಡಿ
ಗುರ್ಣನ ಕಾಂಬೋಕೆ ನಂಟ್ರು ನೋಡಿ
ಮೇರ್ರಿಗೆ ಗುರ್ರ್ಯಾರ ನರ್ಸ ನೋಡಿ
ಮರ್ರ್ಯಾದಿ ಮಾನಕ್ಕೆ ಹೆಚ್ಚ ನೋಡಿ
ಮಗನೊಬ್ಬ ಇದ್ದಾನೆ ಐತು ನೋಡಿ
ಐತಂಗೆ ಮದ್ವೀ ಇಲ್ಲಾ ನೋಡಿ
ಸೋಮಿಯ ರೂಪ ಹೆಸರಾದ್ದು ನೋಡಿ
ಸಂಬಂಧ ಹೂಡೋಕೆ ಬಂಡಾನೆ ನೋಡಿ

**ಗುರ್ಣ**— ನರ್ಸಣ್ಣ ಅಪ್ರೂಪ ಅದೇನ್ ಹೇಳಿ
ನಮ್ಮ ಗುಡೀಗೆ ಬರೂದು ಹೆಚ್ಚೇ ಹೇಳಿ

ಸಂತೋಸಕ್ಕೆ ದಿಕ್ಕಿಲ್ಲ ನಂಗೀಗ ಹೇಳಿ
ಬನಿಬನಿ ಕೂತ್ಕೊಳ್ಳಿ ಚಂದಾಗಿ ಹೇಳಿ

**ನರ್ಸ**— ಮದ್ಮೇರು ಬಳಿಯುವ ನೀನೂ ಹೇಳಿ
ಪೆರ್ಸದೆ ಬಳಿ ನಂದು ನಿಜಕ್ಕೂ ಹೇಳಿ
ಪೆಮ್ಜರಿ ನಾಗಂಗೆ ಮನಸಾದ್ರೆ ಹೇಳಿ
ನನ್ನ ಐತುಗೆ ಸೋಮಿಯ ತರಬೇಕ್ ಹೇಳಿ

**ಗುರ್ಸ**— ಕೂಡೇಲ ದೇವರು ಕಳಿಸಿದ್ದು ನಿಜಕು
ಐತಂಗು ಸೋಮಿಗು ಮೇಳ ನಿಜಕು
ಕೊಂಬಿಗೆ ಕಳ್ಸ ಇಟ್ಟಾಂಗೆ ನಿಜಕು
ಸೋಮಿಯ ಭಾಗ್ಯ ಅದೃಟ್ಟ ನಿಜಕು

**ನರ್ಸ**— ಮುಂದಿನ ಸನ್ವಾರ ಬರಲೇನ್ ಗುರ್ಸ?
ಎಲಿ ಅಡ್ಕಿ ಮರ್ಯಾದಿ ಆಗ್ಬೇಕ್ ಗುರ್ಸ.
ಹಾಂಗಾದ್ರೆ ಮನಿಗೀಗ ಹೋಗ್ತೇನ್ ಗುರ್ಸ
ನರಿಮುಖ ಕಂಡಿದ್ದೆ ಬರ್ವಾಗ ಗುರ್ಸ

**ಮೇಳ**—ಮುಂದಿನ ಸನ್ವಾರ ಬಂದೀದೆ ಭಾರಿ
ನಿಚ್ಚಯ ಆಗಿದೆ ಮದುವೀ ಭಾರಿ
ಬಳೆಕಂಚು ಪಗರೀನ ತರಬೇಕು ಭಾರಿ
ಮಾಮುಲ ಪರ್ಕಾರ ಒಪ್ಪಾರ ಭಾರಿ

**ಮೇಳ**—ನರ್ಸಣ್ಣನ ಮನಿಯೊಳಗೆ, ಏನ್ಹೇಳ್ಲಿ ಚಂದ !
ದಿಬ್ಬಣ ಬರುತದೆ ”
ಐತಣ್ಣನ ಅಬ್ಬೆಗೆ ”
ಹುಬ್ಬುಗಂಟ ಕಾಡೀಗಿ ”
ಮದ್ಮಗನ ದೊಡಬ್ಬೆಗೆ ”
ಬಂಗಾರದ ವಾಲೀಯು ”
ಐತಣ್ಣನ ಸಿಂಗಾರ ”
ಒಡೇರ ಮನೆ ಒಂಟಿ ”
ಸೊಂಟಕ್ಕೆ ಉಡಿದಾರ ”

ತಲೆಗೊಂದು ಮುಂಡಾಸ ,,
ವೃತವನ್ನೆ ಹಿಡ್ದಾನೆ ,,
ಕೋಳೀಯ ಸುಳಿದಾರೆ ,,
ದಿಬ್ಬಣ ಹೊರಟ್ಟಿತಿ ,,
ಆರಾರು ಮುಡಿ ಜೋಡು ,,
ಲೇಲ್ಲೇಲೆ ಹೇಳ್ತಾರೆ ಲೇಲೇಲೆ ಲೇಲಿಲ್ಲ—ಲಿಲೇಲೆ ಲೇಲಾ
ಸುಕ್ರಾರ ಹೊಂಟಾರೆ ,,
ಹಾದೀಮೇಲ್ ಹೋಗ್ತಾರೆ ,,
ದಿಬ್ಬಣದ ಗೋಜೀಗೆ ,,
ಬಾಂಬ್ರೆಲ್ಲ ತೇಲ್ತಾರೆ ,,
ಹಾದೀಯ ಉದ್ದಕ್ಕೆ ,,
ಮದುವೆಯಾಗದಿದ್ದೋರು ,,
ಬಾಯಿ ತೀರ ಬಿಡ್ತಾರೆ ,,
ಐತಣ್ಣನ ಅದೃಷ್ಟ ,,
ತಮ್ಮ ಹಣೆಮೇಲಿಲ್ಲ ,,
ದಿಬ್ಬಣ ಹೊಕ್ಕೇದೆ ,,
ಸವ್ಮ್ಮಾನ ಉಕ್ಕೇದೆ ,,
ಮಾಮೂಲ ಒಪ್ಸ್ಯಾರೆ. ,,
ಊಟದ್ದೆ ಗದ್ದಲ ,,
ಪಾಯಸದ್ದೆ ಪರಿಮಳ ,,
ಸೋಮಿಗೆ ಸಿಂಗಾರ ,,
ಬಿಳಿಸೀರಿ ಉಡ್ಸ್ಯಾರೆ ,,
ಹುಣ್ಣಿಮವಾಸಿಯ ,,
ಸೀರೆ—ವೈ ಬಣ್ಣಕ್ಕೆ ,,
ಮಣೆಮೇಲೆ ಬಂದಾರೆ ,,
ದೀಪಕ್ ಸುತ್ತು ಬಂದಾರೆ ,,
ತಲೆಬಾಗ್ಸಿ ನಿಂತಾಳೆ ,,
ಐತಣ್ಣ ಉಬ್ಬ್ಯಾನೆ ,,

ಸ್ಯಾಸೀಯ ಹಾಕ್ಯಾರೆ ”
ಕಣ್ಣೀರ ಕರ್ದಾರೆ ”
ಗುರ್ವಣ್ಣ ಅಂದಾನೆ ”
**ಗುರ್ವ**— ‘ನನ್ನ ಕರುಳ ಕೊಡ್ತೀನಿ ”
ಅಬ್ಬಿಲ್ದ ಮಗುಸೋಮಿ ”
ವರ್ಸ ಹನ್ನಾರಾಯ್ತು ”
ಸಾಕೂತ ಬಂದಿದ್ದೆ ”
ವರ್ಸಾಯ್ತು ನನಗಿನ್ನು ”
ನಿಂದಿಮು, ಕಾಪಾಡು ”
ಜೋಪಾನ್ನ ಕಾಣಪ್ಪ ”
**ಮೇಳ**—ಚಂದ ಚಂದಾಚಂದ ಮದುಮೀನೆ ಚಂದ
ಚಂದಾ ಕಂಡು ಹಿಗ್ಯಾರು ಬಂದವರು ಎಲ್ಲ
ಚಂದದ ಪಾಯ್ನಕ್ಕೆ ಕಸ್ರೊಂದು ಬಂತು
ಸೋಮಿಯ ಋಣಕಡ್ದು ಹೊಂಟಾನೆ ಚನಿಯ.
ಬಂದ ನಂಟ್ರು ಹೋಗ್ಯಾರೆ
ಸೋಮಿಯ ಒಯ್ದಾರೆ
ಗುರ್ವಣ್ಣ ತಲೆತಗ್ಸಿ
ಗುಡಿಮುಂದೆ ಕುಂತಾನೆ
**ಗುರ್ವ**— ‘ಮದ್ವೀಯ ವ್ಯಾಳ್ಯಕ್ಕೆ ಚನಿಯನ್ನ ಕಾಣೆ’
ಎಂದರೆ ಅವನೆಲ್ಲಿ! ಗುಡಿ ಕತ್ಲುಕೋಣೆ ||
**ಚನಿಯ**—
ಸೂರ್ಯಂಗೆ ಗಿರಾಣ ಹಿಡ್ದಾಂಗುಂಟು
ಚಂದ್ರಂಗೆ ಅಮಾಸೆ ಬಂದ್ಹಾಂಗುಂಟು
ಜೀವನ್ನೆ ಹೆಬ್ಬಾವು ನುಂಗ್ದ್ಹಾಂಗುಂಟು
**ಮೇಳ**— ಸೋಮಿ ಬಿಟ್ಟುಹೋದಿ || ಪ ||
**ಚನಿಯ**—ಈಸೊಂದು ವರ್ಸ ಕೂಡ್ಯಾಡೀದಿ
ಕೈಮೇಲೆ ಜೀವ ಕುಣಿಸ್ಯಾಡೀದಿ
ಆಟಕ್ಕೆ ಮದಿವ್ಯಾಗಿ ಜೀವಾಕದ್ದಿ

**ಮೇಳ**—॥ ಪ ॥

**ಚನಿಯ**—ಮದ್ವಿಯ ನೆನಕೊಂಡು ಮಾತನ್ನೆ ಬಿಟ್ಟಿ
ನನ್ನ ಮೋರೆ ಕಾಣುತ್ಲೆ ತಲೆತಗ್ಗಿಸಿಟ್ಟಿ
ಸೀಟ್ಮಾದ್ಯ ಎಂದಾರು ಹೇಳ್ಳಿಲ್ಲ—ಕೆಟ್ಟಿ

**ಮೇಳ**—॥ ಪ ॥

**ಚನಿಯ**—ಅಡ್ಗೀಯ ಒಲೆಮುಂದೆ ನೀ ಕುಂತಾಗ
ಬೆನ್ಹಿಂದೆ ಇರದಿದ್ರೆ ಜೀವನೆ ಹೋಗ
ನಾ ಕಟ್ಗೆಗೆ ಹೋದಾಗ ನೀನೂ ಹಾಂಗ

**ಮೇಳ**—॥ ಪ ॥

**ಚನಿಯ**—ಓ ಚನ್ನಿ ನಿನಗ್ಯಾನ್ಸು ಹ್ಯಾಂಗೇ ಬಂತು
ಇನ್ನೊಬ್ನ ಕೈ ಹಿಡಿದೆ ನನ್ನ ಬಿಟ್ಟಿಂತು
ಬಾಳೂವೆ ಬಣ್ಣ ಕೆಟ್ರೆ ಬಾಳೂದೆಂತು

**ಮೇಳ**—॥ ಪ ॥

**ಚನಿಯ**—ಕಡ್ದಾದ್ರು ಕೊಯ್ದಾದ್ರು ಹೊಟ್ಟೆತುಂಬೀತು.
ಗಟ್ಟಕ್ಕೆ ಹೋದರೆ ಕಾಸ್ಬಂದೀತು
ಹೊಟ್ಯೊಂದು ತುಂಬೂದು ದೊಡ್ಡಿಲ್ಲಿತ್ತು

**ಮೇಳ**—॥ ಪ ॥

ಎದೆಮೇಲೆ ಗಲ್ಲಿಟ್ಟು ಜೋಸ್ತಿಕೊಟ್ಟಿ
ಮನಸೆಲ್ಲ ಮಾತಿಂದ ಬೆಳಗೀಸಿಟ್ಟಿ
ಕಣ್ಣೀಗೆ ಕಣ್ಣೊಟ್ಟು ದಿಟ್ಟೀನಟ್ಟಿ

**ಮೇಳ**—॥ ಪ ॥

**ಚನಿಯ**—ಅಂಥವಳೆ ಕೈಯನ್ನ ಬಿಟ್ಹೋದ್ಯಾಕ್ಯಲೆ
ಬದ್ಕಿದ್ರು ಸತ್ಹೋದ್ರು ಯತ್ವಾಸಿಲ್ಲೆ
ಎನಾರ ಆಕೊಳ್ಳಿ, ಬದುಕೇ ಒಲ್ಲೆ

**ಮೇಳ**—॥ ಪ ॥

**ಐತಪ್ಪ**—ಮುದ್ದು ಸೋಮಿಯೇ ನಿನಗೇನಾಯ್ತು—ಇಷ್ಟು
ವರ್ಷಕ್ಕೂ ನಗಲೊಲ್ಲೆ ।

**ದಿನವೆಲ್ಲವು ನೀಕೊರಗಿತ್ತೆ; ಏಸುಕರೆದ್ರೂ ನುಡಿವೊಲ್ಲೆ ।**

ಹೆತ್ತು ಕರೆದ್ರೂ ನಿನ್ನಮಾತೊಂದೆ । ತಪ್ಪೇನಾ ಗೈದನೇನೆ
ಮುದ್ದು ಚನ್ನಿಯೆ ಬಳೆಮಾಡ್ಸಿರೆ । ಗಳಿಗೆ ಒಂದೂ ತೊಡಲಿಲ್ಲ
ಹೊಸಕಡಿವಾರ ಸೀರೆತಂದ್ರೆ । ಉಟ್ಟುನಡೆದ್ದ ಕಾಣಲಿಲ್ಲ
ಮದುವ್ಯಾಗಿ ಒಂದುದಾಯ್ತು । ಮನಸ್ಸು ಮಾತ್ರ ಸಿಗಲಿಲ್ಲ
ನಿನ್ನ ಎದೇಲಿ ಏನು ಕೊರೆಯುತ್ತೆ । ಹೇಳಬಾರದೆ
ನನ್ನ ಮುಂದೆ
ಸೊರ್ಗಿಸೊರಗಿ ನೀ ಕಡ್ಡಿಯಾದಿ । ಉಂಡ್ರು ನೀನು
ಉಂಡ್ಹಾಂಗಿಲ್ಲ
ಒಂದೆ ಚಾಪೆಯ ಬಿಡ್ಸಿಬಿದ್ರು । ಮೂಗಿಗೆ ತುರುಬೇತಾಗುತಿತ್ತು
ಕರೆದು ಅಪ್ಪಿದರೆ ಇರುತಿದ್ದೆ । ಸಂಕ್ಟದ ಕೂಸ ಹಿಡ್ದ್ಹಾಂಗಿತ್ತು
ನಿನ್ನ ಕಂಡು ಮಂಕಾಗಿದ್ದೆ । ಮಂಕೇನಿಂತು ಚಿಂತಿ ಬಂತು
ಹೀಂಗೆ ಆದ್ರೆ ಮುಂದೆ ಹ್ಯಾಗೆ । ಪ್ರಾಣದ ಹಕ್ಕಿ
ಗೂಡೊಳಿಪ್ಪುದು
ನನಗಾಗಿ ನೀ ನಗಬ್ಯಾಡೆ । ಚೊಚ್ಚಲು ಬಸಿರಿನೆನಕೊಳ್ಳೆ
ಚಿಂತೆಯೊಳಗೆ ಹೊಟ್ಟೆಕೂಸು । ಕರಗಿ ಸಾಯ್ತೆ ನೀ ಕಾಣೆ
ನಾನೆ ಪಾಪಿ ಎಂದ್ಕೊಂಡಿದ್ದೆ । ಮಗುವಿಂದೇನು ಪಾಪ ಹೇಳೆ ?

**ಮೇಳ**—ಕೂಸಿನ ಮಾತು ಕೇಳಿ ಸೋಮಿ
**ತಾನು** ಬಸಿರಿ ಎಂಬುದು ನೆನೆದು
ಗಂಡನ ಪಿರಿತಿ ಎಣ್ಸಿಕೊಂಡು
ಗೋಳುಗರೆದು ಅಳ್ತಾಳೆ—ಅವನ ಕಾಲ ಹಿಡಿದಾಳೆ ।

**ಐತು**— ಯಾಕೆ ಚನ್ನಿ ನೀ ಹೀಂಗಳುತೀಯ ಎದೆ ನಂದು ಒಡೆತದಿ
ಯಾಕೆ ನನ್ನ ಕಾಲು ಹಿಡಿವೆ । ತಪ್ಪಿಲ್ಲ ಏನಿಲ್ಲ
ನಿನ್ಮೇಲ್ ನಾನು ಸಂಶಯುವ । ನೆನೆಲಿಲ್ಲ, ಅಳಬ್ಯಾಡೆ
ಎಂಥಾದಿದ್ರೂ ಮರೆಬಲ್ಲೆ । ವಂಚ ನೀನು ನಗುದಾದ್ರೆ
ನಿನ್‌ಗುಣಕೇ ಸಮನಿಲ್ಲ । ನಿನ್ನ ಮೋನ ಸೈಸದಲ್ಲ
**ಆದುವೆ ಒಂದು ಚಿಂತೆ ನನಗೆ । ಸಂಶಯ ಎಂಬುದು**
**ಬ್ಯಾರೆ ಇಲ್ಲ**
**ನನ್ನ ಚನ್ನಿಯೇ ಚಂದಗೋಪಿಯೆ । ನಗು ಒದ್ಸೆ ನಗು ಬಾರೆ**

**ಮೋಳೆ**—ಮೌನವ ಕಟ್ಟಿ ಕಡಿಯಿತೀಗ
ಸಂಶಯದ ಮಾತು ಬಂದ ಗಳಿಗೆ
ಬಚ್ಚಿಡುದೆಲ್ಲ ತಪ್ಪು ಎಂದು
ಹೊಳೆ ಹೊಳೆ ದುಃಖ ಹರಿಸಿಯಾಳೆ ! ಬಾಯಿ
ತೆರ್ಯ್ಯೋಕೆ ನಿಂತಾಳೆ ||

(ಮೃದುಗತಿಯಿಂದ ಸರಿಯುವುದು.)

**ಸೋಮಿ**—ನಿಮದೇನು ತಪ್ಪಿಲ್ಲ, ಈಸಾದ್ರು ಹುಳುಕಿಲ್ಲ
ಈಕಿಯ ಹಣೆಮೇಲೆ ಬರ್ಮಪ್ಪ ಬರೆದಿಲ್ಲ
ದೈವಕ್ಕೆ ನಾನೂ ಬೇಡಾದವಳು || ಪ ||
ಯಾಕಾರು ಈ ಪಾಪಿ ಕೈ ಹಿಡಿದು ದಣಿತೀರ
ತುಂಬಿಚಲ್ಲುವದೆಂದು ಕಡಲ್ನೀರ ಕುಡಿತೀರ ||
ನಿಂಜೋಸ್ತಿ ಒಲವೆಂದು ನನ್ನ ತಬ್ಬಿಕೊಂಡೀರಿ
ಈ ಮನೆಗೆ ಬಂದಿಂದೆ ತಲೆಮ್ಯಾಗೆ ಕುರ್ಸೀರಿ ||
ಕುರ್ಸುಕೊಂಡು ಬಂತೇನು? ಮುದ್ದಿಟ್ಟು ಆಯ್ತೇನು
ನೀರು ತಪ್ಪಿ ನೆಲದ ಮೇಲೆ ಬಿತ್ತೊಂದು ಮೀನು ||
ನಾನಾರು ಸಾಕಷ್ಟು ಒಡಿದಾಟ ಮಾಡ್ಯೇನು
ಋಣಪ್ರೀತಿ ತೀರ್ಸೋಕೆ ಎದೆಯನ್ನೆ ಕಡೆದೇನು ||
ನಿಮ್ಮ ರಕ್ತನಾ ಪಡೆದು ತಾಯಾಪ ಗಳಿಗೆಗು
ಋಣ ಸಾಲ ಹರಿಲಿಲ್ಲ ಬಡ್ಡಿಯು ತೀರ್ಲಿಲ್ಲ ||
ಈ ಜನ್ಮ ಕಳೆಯುತ್ತೆ ಹುಯ್ಕೊಂಡು ಹೀಂಗೋಳು
ಮುಂದೊಮ್ಮೆ ಹುಟ್ಟುವೆ ದಕ್ಕಿಸೆ ನಿಮ್ಕೂಳು ||
ಮಾತೊಂದ ಹೇಳ್ತೀನಿ ನಿಮ್ಮೆದೆಯ ಒಡ್ಯೋಕೆ,
ಭಗವಂತ ಮೆಚ್ಚೋಕೆ, ಈ ಹೊರೆಯ ತಗ್ಸೋಕೆ ||
ಹಾಂಗೆಂದು ಹೇಳ್ತೀನಿ, ಈ ಜೀವ ನಿಮದಲ್ಲ
ನನ್ನಿಂದ ಸುಖವಿಲ್ಲ ನನ್ಮನಸೆ ನನದಲ್ಲ ||
ನನಗ್ಗುತ್ತು ವರ್ಸಿತ್ತು ಚನಿಯಪ್ಪ ಮನಿಗ್ಬಂದು
ನಮ್ಮಪ್ಪ ಬರ್ಸ್ಕೊಂಡ ನನ್ನಾಟಕ್ಕಾಯ್ತೆಂದ ||
ಚನಿಯಂಗು ಸೋಮಿಗು ವೈರೂಪ ಜೇರಿತ್ತು

ಆ ಮುದ್ಕಿ ದಿನಮೊರೆಗು ಜೀವ್ ಮಾತ್ರ ಬೆರೆತಿತ್ತು ॥
ನನ್ನ ಬಿಟ್ಟು ಅವನುಣ್ಣ; ಅವನಿಲ್ಲದೆ ನಾನುಣ್ಣೆ
ಆಟ್ಟಕ್ಕೆ ಮದಿವ್ಯಾಯ್ತು ಓಂದು ಬಾಳೆಹಣ್ಣು ॥
ಅಪ್ಪಂಗೆ ಎದುರಾಡಿ ಕರುಳ್ತಿವಿಯ ಬಾರದೆಂದು
ನನ್ಮನಸ ಬಚ್ಚಿಟ್ಟು ನಾಹೊರಟೆ ನಿನ್ನಿಂದು ॥
ಅಂದೇನೆ ನನ್ತನಿಯ ಗುಡಿಬಿಟ್ಟು ಹೊಂಟೋದ,
ಎಂದೆಂದು ಅವನ್ನೆರಳು ಕಣ್ಮುಂದೆ ಕಟ್ಟದೆ ॥
ನೀವ್ ನಿಂತು ಮುಟ್ಟಿದ್ರೆ, ಏನಾರು ಆಡಿದ್ರೆ
ಅವನ್ರೂಪ ಅಡ್ಡಂದು ತಡಿತದೆ ಏ ದೇವ್ರೆ ॥
ನಿಮ್ಮಗು ಹೊತ್ಕೊಂಡು, ಆ ಚನಿಯನ್ನೆನೆಯುತ್ತೆ,
ಈ ಜೀವ ನಡುಗುತ್ತೆ, ನರ್ಕೊಂದು ಕುಣಿಯುತ್ತೆ ॥

**ಮೇಳ**—ಮಾತು ಮುಗಿದಿತ್ತು
ಘಾತು ಹಾರೀತು
ಸೋಮಿ ತಾಯಿಯು ಅಲ್ಲೆ ಬಿದ್ದಾಳು
ಐತು ಕಣ್ಣೀರ
ಸೋತು ಸುರಿಸ್ಯಾನು
ಸೋಮಿ ದುಃಖವ ತಾನು ಹೊತ್ತಾನು
ಸುದ್ದಿ ಕಳ್ಸ್ಯಾನು
ತಾನು ಕುಂತಾನು
ಹಾಸಿಗೆ ಹಿಡಿದವಳ ಬಳಿಯೆ ನಿಂತಾನು
ಮಾಸ ಸಂದಿತ್ತು
ಸೋಮಿ ಬಾಯ್ಮುಚ್ಚಿ
ಹೊಟ್ಟೆ ಸೂಲೆಗೆ ಉರುಳುತಿದ್ದಾಳೆ
ಗಳ್ಗೆಗಳ್ಗೆಗೂ
ಸೋಮಿ ಕಿಮಿಯಾರೆ
ಐತು ಏನನ್ನೊ—ಹೇಳ್ತ ನಿಂತಾನೆ
ಕಾಲಬಂದೀತು
ಸೋಮಿ ತಾಯಾಗೆ

ಅತ್ತೆ ಬಂದಾಳು—ಕೂಸುಕಂಡಾಳು ||
ಚೋಟು ಕೂಸೊಂದು
ಮಲಗಿಕೊಂಡಿಹುದು
ತಾಯಿ ಗಳಿಗೆಯ—ಕಾಯುತ್ತಿದ್ದಾಳೆ ||
ಯಾರೊ ಹೊರಗಿಂದ
ಕೂಗಿ ಕರೆದಾರು
ಐತು ಎಲ್ಲವರ ದೂರ ಕಳ್ಸ್ಯಾನು ||
ಹೊರ್ಗೆ ಹೋಗುತ್ತೆ
ಕರ್ಮ ತಂದಾನು
ಯಾರೊ ಒಬ್ಬಾನು—ನೋಡಬಂದಾನು ||
ಒಂದು ಚಣಕ್ಕೆ
ಕಣ್ಣು ತೆರೆದಾಳು
ಸೋಮಿ ನಕ್ಕಾಳು—ಚನಿಯ ಬಂದಾನೆ !
ತುಟಿಯ ಒಡೆದಾಳು
"ನಂತಪ್ಪು" ಎಂದಾಳು
"ಚನಿಯ ಹೋಗ್ತೇನೆ"— ಮಾತು ಮುಗಿಸ್ಯಾಳು ||
ಅಲ್ಲಿಗಾಗಿತ್ತು
ದೀಪ ನೊಂದಿತ್ತು
ಎಲ್ಲ ಮುಗೀತು—ಗೋಳು ಉಳಿಯಿತು ||

——ooo——

# ಪಾತ್ರ ಪರಿಚಯ

**ಸೂರು, ಭಿರ್ಮ**—ಊರಿನ ಸುದ್ದಿಗೆ ಬಲಿಯಾಗುವ ದಂಪತಿಗಳು.

**ಚೋಮ, ದೂಮ, ಪಾಪ, ಪೆರಮ, ಅಚ್ಚ, ಲಚ್ಚ, ಸಾಂಬ, ಈಸೂರ, ಚಿಕ್ಕಪ್ಪ, ಕುಕ್ಕಪ್ಪ**— ಇವರೆಲ್ಲ ಊರವರು. ಸೂರು ಬಿರ್ಮರ ಕತೆಯಲ್ಲಿ ಆಸಕ್ತರಾದ ಸುದ್ದಿಗಾರರು.

**ಸುಬ್ರಾಯ, ಸೇಸಣ್ಣ**—ಸುದ್ದಿಗೆ ಆಗಂತುಕರಾಗಿ ಸೇರುವವರು.



೧

(ತೆರೆಯ ಒಳಗಿಂದ ಜನರ ಪಿಸು ಮಾತುಗಳು ಕೇಳಿಸುವುವು.)

ಯಾರೋ ಅಂದರು !
ಏನಂತೆ ?
ಯಾರೋ ಅಂದರು ; ಯಾರೋ ಅಂದರು !!
ಏನಂತೆ ? ಏನಂತೆ ?
ಯಾರೋ ಅಂದರು ;ಯಾರೋ ಅಂದರು !ಯಾರೋ ಅಂದರು !!
ಏನಂತ ? ಏನಂತೆ ? ಏನಂತೆ ?

(ಚೋಮಣ್ಣ , ದೂಮಣ್ಣ ಎಂಬಿಬ್ಬರು ಪ್ರವೇಶಿಸುವರು.)

**ಚೋಮ**—ಯಾರೋ ಅಂದರು !

**ದೂಮ—** ಏನಂತೆ ?

**ಚೋಮ**—ನೀರೀಗೆ ಹೋಪಾಗ ಸೂರಕ್ಕ ಮೊನ್ನೆ
ಜಾರೀ ಬಿದ್ದಳಂತೆ ! ನೀರೀಗೆ
ಜಾರೀ ಬಿದ್ದಳಂತೆ.

**ದೂಮ**— ಆ .... ಹಾಂ.

**ಚೋ.**— ನೀರಿಗೆ ಜಾರೀ ಬಿದ್ದಳಂತೆ.
ನೀರೇನು ಕೆರೆಯೊಳಗೆ ಇದ್ದಿಲ್ಲವಂತೆ
ನೀರಿಲ್ದ ಕೆರೆಯಲ್ಲಿ ಬರಿ ಕೆಸರಂತೆ
ಕೆಸರೊಳಗೆ ಮುಳುಗಿ ಹೋಗಿದ್ದಳಂತೆ
ಬಿರ್ಮಣ್ಣ ಓಡ್ಬಂದು ಕೈಕೊಟ್ಟನಂತೆ
ಮೇಲೆತ್ತಿ ಕಾಂಬಾಗ ಬರಿ ಹೆಣವಂತೆ.

**ದೂ.**— 'ಬರಿ ಹೆಣವಂತೆ' !

**ಚೋ.**— ಸತೆಣ್ಣವಂತೆ !

**ದೂ.**— ಹಿಂಗೇನು ? ಹೀಂಗೇನೂ ?
ಯಾಕೆ ಸೂರಕ್ಕ ಜಾರಿ ಬಿದ್ದಳೊ ?
ಕತ್ತಲಾಗಿತ್ತೇ, ಎಣ್ಣೆ ಬತ್ತಿತ್ತೇ ?

**ಚೋ.**— ಸಂಗ್ತಿ ಹೇಳ್ತೇನೆ, ಕತೆಯೆ ಬ್ಯಾಡುಂಟು.
ಗಂಡ ಹೆಂಡ್ರೊಳಗೆ ಅಷ್ಟಕ್ ಅಷ್ಟಂತೆ !

**ದೂ.**— 'ಅಷ್ಟಕ್ ಅಷ್ಟಕಂತೆ!' ಅಂದ್ರೆ ಯಾಕಂತೆ ?
ಬಿರ‍್ಮ ಸೂರುಗೆ ಕಚ್ಚು ಯಾಕಂತೆ ?
**ಚೋ.**— ಅದ್ನೆ ಹೇಳ್ತೇನೆ: ನಾನು ಕಂಡಿಲ್ಲ;
ಆದ್ರೆ ಮಾತ್ಮಾತ್ರ ಎಂದೂ ಸುಳ್ಳಲ್ಲ.
ನಾನೇ ಕಾಣ್ದಿದ್ರು ಕಂಡವ್ರು ಹೇಳಿದ್ದು.
ಕಂಡದ್ ಕಂಡಾಂಗೆ ಹೇಳಿದ್ ಕೇಳಿದ್ದು.
ಎದ್ರಿಗ್ ಅನ್‌ದಿದ್ರೂ ಹಿಂದಕ್ ಅಂತಾರೆ
'ಬಿರ‍್ಮ ಎಂಬವ—ಯಾಕು ಮಡಿದವ'.
**ದೂ.**— ಬಿರ‍್ಮನ ಮಾತ್ಬಿಡು. ಗಂಡ್ಸರ ಜಾತೀಲಿ
ತೆಗೆದು ಸುಳ್ಬಾಂಗೆ; ಹಾದೀಲಿ ಬಿದ್ದವ.
ನಟ್ಟು ಬೆಳೆಸಿದ ಗಿಡದ ಲಕ್ಷಣ
ಬಿದ್ದು ಹುಟ್ಟಿದ 'ಹಾಗ್ಲಿ'ಗುಂಟೇನ ?
**ಚೋ.**— ಅದೇ ಅಂತೇನೆ,
ಅದೇ ಅಂತೇನೆ,
ಅದೇ ಅಂತೇನ
ಅವನಪ್ಪನ ಜೇರೆಲ್ಲ ನಂಗೇ ಗೊತ್ತು.
**ದೂ.**— ಅವನಮ್ಮನ ಮನೆಯವರು ಎಲ್ರಿಗು ಹೊರ್ತು
**ಚೋ.**— ಅವನ ಕುಲಕೇ ಗೊತ್ತಿಲ್ಲ ಬೆವ್ರೆಂಬುದು ಸುರ್ಸಿ.
**ದೂ.**— ಹಿಡಿದ್ ಹಿಡಿದು ಕೊಡಬೇಕು ಮಾರ್‍ಯಮ್ಮಂಗೆ ಸಿರ್ಸಿ,
**ಚೋ.**— ಹಾಂಗಿರ್ತ ಇವನೊಬ್ಬ ದುಡಿವಂತ ಮಗನೆ ?
**ದೂ.**— ಅಂಗೈಯಾಗೀನ ಹುಣ್ಣಿಗೆ ಕನ್ನಡಿ ಯಾಕೆ ಏನ ?
**ಚೋ.**— ಅದೇ ಅಂತೇನೆ
ಅದೇ ಅಂತೇನೆ
ಅದೇ ಅಂತೇನೆ;
ಕಡಿಯಕ್ಕಿ ಕೆಲ್ಸವ ಮಾಡ್ತವನೆ ಅಲ್ಲ.
**ದೂ.**— ಹಾಗಿಂದ್ರು ದಿನಮಾತ್ರ ಹೋಗ್ತದೆಯಲ್ಲ !
**ಚೋ.**— ಅದ್ರ ಗುಟ್ಟು ಬ್ಯಾರುಂಟು, ಬಾಯ್ಬಿಡೋದು ಸಲ್ಲ.
**ದೂ.**— ಒಳಗಿನ ಗುಟ್ಟು ಶಿವನಿಗೇ ಗೊತ್ತು ಎಂಬರಲ್ಲ !

ಚೋ.— ಸಂಜೆ ತನಕ ಮನೆಬಿಟ್ಟ ಮಗನಿವನಲ್ಲ.
ದೂ.— ಗುಡ್ಗುಮ್ಮ ಗೂಡ್ಬಿಟ್ಟು ತಿರ್ಗೋಕೆ ಮರ್ಲ ?
ಚೋ.— ಗುಮ್ಮಕ್ಕಿ ಇವನೂ; ಹೊತ್‌ಕಂತತ್ಲೆ ಎದ್ದ.
ದೂ.— ಪೋಳ ಬೆಕ್ಕಿನ ಯಾಪಾರ ಕತ್ಲೊಳಗೆ ಸುದ್ದ.
ಚೋ.— ಅದೇ ಅಂತೇನೆ
ಅದೇ ಅಂತೇನೆ
ಅದೇ ಅಂತೇನೆ;
ಬೆಳ್ಳಿ ಪೂರಾ ಮೂಡೂಕಿಲ್ಲ; ಕೈಲಿ ಕಾಣು ಕಾಸು!
ದೂ.— ಸಾಜವಾದ ಕಜ್ಜಕ್ಕೆ ಕೊಡುವವರಿಲ್ಲ ಮೂಸು.
ಚೋ.— ಕಲಿಯುಗ ಅಂಬುದದಕೆ, ಕಳ್ರಿಗೇ ಕಾಲ.
ದೂ.— ಕಳ್ತನವೋ ಏನ್ಮಣ್ಣೋ, ಸತ್ಯಕ್ಕಂತು ಸೋಲ.
ಕತೆಯ ಮತ್ತ್ಯಾಕಲ್ಲ!
ಕತೆಯ ಮತ್ತ್ಯಾಕಲ್ಲ!
ಕತೆಯ ಮತ್ತ್ಯಾಕಲ್ಲ!
ಚೋ.— ಹೇಳುವುದುಳೀತೇ
ಕತೆ ಮುಂದಕ್ಕೆ ?
ಪರರ ಎಂಜ್ಲಿಗೆ
ಬಾಯಿ ಹಾಕ್ಲಿಕ್ಕೆ
ತಾನು ಹೋದರೆ
ತನ್ನ ಅನ್ನಕ್ಕೆ
ಬೀದಿ ನಾಯಿಯು
ಬರೂದು ಮುಕ್ಲಿಕ್ಕೆ
ದೂ.— ಹೆತ್ನಾರೆ ಹೇಳು !
ಹೆತ್ನಾರೆ ಹೇಳು !
ಹೆತ್ನಾರೆ ಹೇಳು ! ........ ಆದ್ರೆ ಬಿರ್ಮನ ಬಿಟ್ಯಲ್ಲ ?
ಚೋ.— ಮಿಣ್ಣಗಿದ್ದವರ
ಬಣ್ಣ ವ್ಯಾಲಂತೆ
ಹೆಣ್ಣು ಆದವಳು

ತಾಳಿಕೊಂಡಾಳೆ ?
ಊಟಕ್ಕಿಲ್ಲದ
ಉಪ್ಪು ಯಾಕಂತೆ ?
ಜತೆಗಿಲ್ಲದ
ಗಂಡ ಯಾಕಂತೆ ?

**ದೂ.**— ಅದು ಮಾತಣ್ಣಾ
ಅದು ಮಾತಣ್ಣಾ
ಅದು ಮಾತಣ್ಣಾ........ಅಂದ್ರೆ ಬೇರಾರ್ನ ಕರ್ದಳೇನಣ್ಣಾ

**ಚೋ.**— ಕೇಳು ದೂಮಣ್ಣಾ
ಕರ್ಯೊದ್ಯಾಕಣ್ಣಾ ?
ಹಪ್ಪು ಬಿದ್ದಿದ್ರೆ
ಹದ್ದಿಗೆ ಹೇಳ್ತಾರ ?
ರೂಪು ಒಂದಿದ್ರೆ
ಊರಿಗೆ ಊರುಂಟು,
ಯಾವನೋ ಬಂದನು
ಗಂಟು ಬಿದ್ದನು.

**ದೂ.**— ಸಮ ಆಯ್ತಣ್ಣಾ.
ಸಮ ಆಯಣ್ಣಾ.
ಸಮ ಆಯ್ತಣ್ಣಾ ........ ಸೆಗಣಿ ಬಿದ್ದಲ್ಲಿ, ಹುಳು ಸಾವಿರ!

**ಚೋ.**— ಕ್ಯಾದಿಗೆಗೆ ಬನಕ್ಕೆ ಹಾವೇ ನಂಟು
ಚಳ್ಳನ ಕಾಯಿಯು ಒಟ್ಟಾರೆ ಅಂಟು.
ತೊಡಮೆಯ ಗೂಟವ ಮನೆಯವನೆ ಕಿತ್ತ.
ಕಾದಿದ್ದ ಎತ್ತಿಗೆ ಹಿತ್ಲೆಲ್ಲ ಭುಕ್ತ.

**ದೂ.**— ಅದು ಇರ್ಲಣ್ಣಾ
ಅದು ಇರ್ಲಣ್ಣಾ
ಅದು ಇರ್ಲಣ್ಣಾ........ಕೆರೆ ಕತೆಯೇನು ಬೇಗ ಹೇಳಣ್ಣಾ

**ಚೋ.**— ನೀನೊಬ್ಬ ಬೆಪ್ಪ! ಹೇಳಲೇನುಂಟು ?
ಇಷ್ಟೆಲ್ಲ ಹೇಳ್ದೆ, ಗುಟ್ಟೆಲ್ಲುಂಟು ?

ಒಂದಿನ ಬಿರ್ಮ ರಾತ್ರೇನೆ ಬಂದ:
ಬಂದವನ್ನೇ ಕೂಗಿ, 'ಬಾಗಿಲು' ಎಂದ.
ಕೂಗಿದ, ಕೂಗಿದ ಗಂಟ್ಲೇ ಸೀಳಿ,
ಬಾಗಿಲ ತೆರಿಲಿಲ್ಲ ಆ ಮೂಂಕಾಳಿ.
ಸಿಟ್ಟಿಂದ ಕುದಿತಾನೆ ನಮ್ಮಣ್ಣ ಬಿರ್ಮ,
ಬಾಗಿಲು ಮುರಿದದ್ದೆ—ಗೊತ್ತಾಯಿತು ವರ್ಮ:

**ದೂ.**— ಹ್ಯಾಪ್ ಚೋಮಣ್ಣ.
ಹ್ಯಾಪ್ ಚೋಮಣ್ಣ.
ಹ್ಯಾಪ್ ಚೋಮಣ್ಣ....ಇವನಿಗಂತೇನೆ ಅದೇ ಮದ್ದಣ್ಣ

**ಚೋ.**— ಸಮ್ನಿರು ದೂಮಣ್ಣ, ಕತೆ ಕೇಳು:
ಬಂದವಂಗೆ ಬಿತ್ತೇಟು; ಗೋಳೇ ಗೋಳು.
ಬದ್ಕಿದ್ದೆ ದೊಡ್ಡಂತ ಅವ ಪಲಾಯ್ನ;
ಸೂರಕ್ಕಂಗೆ ಆಯ್ತಂದು ಮನೆ ಕೈರಿ ಅಯನ.

**ದೂ.**— ಹಾಂಗೆ ಆಯ್ತೇನು!
ಹಾಂಗೆ ಆಯ್ತೇನು!
ಹಾಂಗೆ ಆಯ್ತೇನು!....ನಿಜಕು ಲಾಯ್ಕಣ್ಣ.

**ಚೋ.**— ನೀರಿಗೆ ಹೋದಾಗ ಸೂರಕ್ಕ ಮೊನ್ನೆ
ಜಾರೀ ಬಿದ್ದಳಂತೆ ! ನೀರಿಗೆ
ಜಾರೀ ಬಿದ್ದಳಂತೆ.
ನೀರೇನು ಕೆರೆಯೊಳಗೆ ಇದ್ದಿಲ್ಲವಂತೆ.
ಕೆಸರೊಂದು ಅದರೊಳಗೆ ಕಮ್ಮಿಲ್ಲವಂತೆ
ಹಾಂಗಿದ್ದು ಅದರೊಳಗೆ ಹಾರೀದಳಂತೆ
ಗಂಡನ ಮೇಲ್ಸಿಟ್ಟೆ ಕಾರಣವಂತೆ.
ಈ ಜೀವ ಬ್ಯಾಡೆಂದು ಮುಗಿಸಿದಳಂತೆ

೨

(ತೆರೆಯಲ್ಲಿ ತಿರುಗಿ ಗುಜು ಗುಜು ಸದ್ದು ಕೇಳುವುದು)
ಯಾರೋ ಅಂದರು!
ಏನಂತೆ ?

ಯಾರೋ ಅಂದರು! ಯಾರೋ ಅಂದರು!
ಏನಂತೆ ? ಏನಂತೆ ?
ಯಾರೋ ಅಂದರು!ಯಾರೋ ಅಂದರು! ಯಾರೋ ಅಂದರು-
ಏನಂತೆ ? ಏನಂತೆ ? ಏನಂತೆ ?

(ಅಚ್ಚಣ್ಣ ಮತ್ತು ಲಚ್ಚಣ್ಣರು ಸೇರಿ ಮಾತಾಡುತ್ತಾ ಬರುವರು)

**ಅಚ್ಚಣ್ಣ**— ನೀರಿಗೆ ಹೋದಾಗ ಸೂರಕ್ಕ ಮೊನ್ನೆ
ಜಾರೀ ಬಿದ್ದಳಂತೆ ! ನೀರಿಗೆ
ಜಾರೀ ಬಿದ್ದಳಂತೆ.
ನೀರೇನು ಕೆರೆಯೊಳಗೆ ಇದ್ದಿಲ್ಲವಂತೆ
ಕೆಸರೊಂದು ಅದರಲ್ಲಿ ಕಮ್ಮಿಲ್ಲವಂತೆ
ಹಾಂಗಿದ್ದು ಅದರೊಳಗೆ ಹಾರಿದಳಂತೆ
ಗಂಡನ ಮೇಲ್ಸಿಟ್ಟು ಕಾರಣವಂತೆ
ಈ ಜೀವ ಬ್ಯಾಡೆಂದು ಮುಗಿಸಿದಳಂತೆ.

**ಲಚ್ಚಣ್ಣ**— ಹಾಂಗೊಂದು ಸುದ್ದ್ಯಂಟು; ದೇವರೇ ಬಲ್ಲ!
ಸಂಗ್ತ್ಯಾನುಸಾರೊಂದು ತಿಳಿಯೋದೆ ಇಲ್ಲ.
ಅವರ್ಮನೆಗಂಟ ಹೋಗಿದ್ದೆ ಇಬ್ಬರೂ ಇಲ್ಲ
ತಳಕ್ಕಂತು ಮುಟ್ಟುದಿಲ್ಲ ಬುದ್ಧಿಯ ಜಲ್ಲ

**ಅ** — ಅದರ ಗುಟ್ಲು ನಾಬಲ್ಲೆ
ಬಿರುಮೇನು ಹೊಸಬಲ್ಲ.

**ಲ.**— ನನಗಂತು ಸೂರಕ್ಕ
ಒಂದ್‌ಲೆಕಕ್ಕೆ ಸೊಸೆಯಲ್ಲ.

**ಅ.**— ಹಾಂಗಿದ್ರೆ ಸೊಲ್ಲಿಲ್ಲ;
ನಂಟ್ರ ಮುಂದೆ ಒಯಿನಲ್ಲ.

**ಲ.**— ನಿಂಗ್ ಮಳ್ಳು ಲಚ್ಚಣ್ಣ!
ಸತ್ಯಕ್ಕೇನು ದಾಕ್ಷಿಣ್ಣ
ನಂಟ್ರವರು ಅಂದ್ಮಾತ್ರ
ಕಳ್ಳನಕ್ಕ ಏನ್ ಹತ್ರ ?
ಸುಳ್ಳಿಗೆ ತಳವಿಲ್ಲ! ನ್ಯಾಯಕ್ಕೆ ವಯಿಯಿಲ್ಲ-

ಇದ್ದದ್ದ ಹೇಳಲ್ಲಿ, ಅವಳು ಸತ್ರು ಚಿಂತಿಲ್ಲ.

ಅ.— ಹಾಂಗಿದ್ರೆ ಹೇಳ್ತೀನಿ, ತಪ್ಪಿದ್ರೆ ತಿಳ್ಸೀನು

ಲ.— ತಪ್ಪೇನು ಒಪ್ಪೇನು? ಇದ್ದದ್ದ ಹೇಳ್ತೀನು.

ಅ.— ಕಣ್ಣಾರೆ ಕಂಡವರು ಹೇಳೀದ ಮಾತಿದು
ಸುಳ್ಳೆಂದು ತಿಳಿಬೇಡ ಲಚ್ಚಣ್ಣ ನೀನಿದ

ಲ.— ಓ........ಹಾಂಗೇಽನು ?

ಅ.— ಬಿರ್ಮನ ತಪ್ಪಿಲ್ಲ, ಏನೇನು ಇಲ್ಲಂತೆ.
ಸೂರಕ್ಕನ ಸೊಕ್ಕೇ ಕಾರಣವಂತೆ

ಲ.— ಓ ......ಹಾಂಗೇಽನು ?

ಅ.— ಹೊರಗಂಟ ಹೋದವ ಹೊತ್ತಿಗ್ಮುಂಚೆ ಒಂದಂತ
ಆಸ್ರಿಗೆ ನೀರೆಂದು, ಕೇಳಿದನಂತೆ.

ಲ. ಓ........ಹಾಂಗೇಽನು!

ಅ. ತರ್ತೇನೆ ಎಂದವಳು ಒಳಮನೆಯ ಸೇರ್ಕೊಂಡು
ಗುಜು ಗುಜು ಅಂದದ್ದು ಕಿವಿಗೆ ಬಿತ್ತಂತೆ

ಲ.— ಓ ......ಹಾಂಗೇಽನು!

ಅ.— ದಿಗಿಲಾಯ್ತು ಬಿರ್ಮಂಗೆ ಸರಸರ ಒಳಗ್ಹೋದ
ಬ್ಯಾರೊಬ್ಬ ಅಲ್ಲಿ ನಿಂತಿದ್ದನು.

ಲ.— ಓ........ಹಾಂಗೇಽನು!

ಅ. ಬಿಟ್ಟಾನ ಬಿರ್ಮಣ್ಣ? ಎದೆ ರಕ್ತ ಕುದಿವಾಗ
ಕೆನ್ನಿಗೆ ನಾಕೇಟು ಏರ್ಸಿದನಂತೆ

ಲ.— ಯಾಽರಿಂಗೆ?

ಅ.— ಬಂದವಂಗೆ ನಾಕೇಟು. ಇವಳಿಂಗೆ ಎಂಟಂತೆ
ಒತ್ತಿಒಪ್ಪ ಸಿಟ್ಟೀಗೆ ಕೊಟ್ಟೇಬಿಟ್ಟ.

ಲ.— ಯಾಽರಂವ?

ಅ.— ಒಂದಂವ ಯಾರಂದ್ರೆ ಅವನಲ್ದೆ ಮತ್ಯಾರು?
ಪರಮಣ್ಣನ ಸಣ್ಮಗ ಸುಬ್ರಾಯನಂತೆ.

ಲ.— ಲಾಽ....ಯ್ಕಾಯ್ತು.
ಹಾಂಗಿದ್ರೆ ಹೇಳ್ತೀನಿ ಆ ಕಥೆ ಬ್ಯಾರುಂಟು

ಹೆಂಗ್ಸ್ರೊಳಗೆ ಸುಳಿದಿಟ್ಟರೆ, ಸೂರಕ್ಕ
। ಸುಳ್ಳಲ್ಲ
ಅವಳ್ ಕಣ್ ನಾಟದಿದ್ದ ಜನವಿಲ್ಲ ॥

ಪರಮಣ್ಣನ ಮಗಚಂದ; ಪಿರಾಯಕ್ಕೆ ಬಂದವ
ತೊಂಡೆ ಹಣ್ಣಿನ ತುಟಿ ಕಂಡ್ಲು ಸೂರಕ್ಕ
। ಸುಳ್ಳಲ್ಲ.
ಗುಂಡಿನಂಥ ಹುಡುಗನ ಸೆಳೆದಾಳು ॥
ಅಂಚಿನಾಗೊಂದೀನ, ನಾಬೈಲಲ್ಲಿ ಬಪ್ಪಾಗ
ಸುಬ್ರಾಯ ಸೂರಕ್ಕ ಮೆರಿತಿದ್ರು
। ಮದವೇರಿ
ಹೆಗಲ್ ಮೇಲೆ ಕೈಯಿಟ್ಟು ಗಟ್ಟಿಗಿತ್ತಿ ॥

ನಾ ಬಂದ್ರು ಕಾಣ್ಲಿಲ್ಲ; ನನಿಯಕ್ಕು ತೇಲ್ಲಿಲ್ಲ
ಹೊಳೆಗಿಳ್ದ ಹೆಣ್ಣಾವಳು ಚಳಿಯೇನು!
। ಅಚ್ಚಣ್ಣ
ಬೈಲಲ್ಲೆ ಹೀಂಗಾದ್ರೆ ಮನ್ಯಂಗೆ ?

ಅ. — ನಾನವಳ ಗಂಡಾದ್ರೆ ಎಂದೆ ಪಡ್ಜಾಗತಿದ್ಲು
ಬಾಳ್ಸಲಿಕ್ಕೆ ಬಾರದವ ಗಂಡೇನು ?
। ಆ ಬಿರ್ಮ
ಬೊಳ್ಳೂದೆ ಸಮವಂತೆ ಮೊಸೀನ. ॥

ಇವ ಬೆಪ್ಪ ಆದ್ದಕ್ಕೆ ಅವಳು ಬಾವಿ ಹಾರಿದ್ಲು
ನೀರಿಲ್ಲದ ಕರೆಯಲ್ಲಿ ಹಾರ್ತಾರೋ
। ಯಾರಾದ್ರು
ಹಾರಿದ್ರು, ಇವನ್ಯಾಕೆ ತೆಗೆಬೇಕು ? ॥

ಲ. — ಅವನ್ ತಪ್ಪು ಏನುಂಟು, ಹೆಣವಾದ್ರು ತೆಗಿಬ್ಯಾಡ್ವ

ತೆಗೆದದ್ದು ನಿಜವಾದ್ರೆ, ಸತ್ತೀನೋ
| ನಿಜವು
ಸಾಯೂಕೆ ಎಂದವಳು ಹಾರಿರ್‍ಲ್ಲಿ,

ಅ. — ಬಿರ್‍ಮನ್ನ ಹೆದರ್‍ಸೋಕೆ ಹಾರಿರ್‍ಬೇಕು ಗಟ್ಟಿಗಿತ್ತಿ
ಕಾಲಿಗೆ ಸೆರಗಡ್ಡ ಆಯ್ತಂತೆ
| ಲಚ್ಚಣ್ಣ
ಯಮ್ರಾಯ್ನಿಗಿಚ್ಚಿಯಾಗಿ ಕೊಂಡ್ಹೋದ. ||

ಲ.— ಪಾಪಾನ ಕಾಣ್ಸಾರ್ದೆ ಯಮ್ರಾಯ ಸಾಗ್ಸೀದ
ಬಿರ್‍ಮಣ್ಣಂಗ್ಯಾಕೋ ಒಲುಚಿಂತಿ.
| ಅಂದರೆ
ಮದ್ದರ್‍ಮ ಕೊಟ್ಟವಳು ಅವಳಲ್ವೆ!

ಅ.— ಮದ್ದೀನ ಮಂಕಲ್ದೆ ಬಿರ್‍ಮಣ ಹಾಂಗಾಗ
ಹುಲಿಯಂಥ ಮನ್ಸಾ ನಾ ಬಲ್ಲೆ
| ಅಂತೇನೆ
ಹೆಂಡ್ತೀಗೆ ಹೆದರೋ ಮಗನಲ್ಲ!

ಲ.— ಅದು ಮಾತ್ರ ಸುಳ್ಳಣ್ಣ; ಸೂರಕ್ಕನ ಸೊಂಕೀಗೆ
ಸಿಂಹನಂಥ ಮನ್ಸ ಸಿಂಗಲೀಕ
| ಅಂತೇನೆ
ಚಂದದ ಹೆಣ್ಣೆಂದ್ರೆ ಭಂಗಿಪಾಸ್ಕ.

೩

(ತೆರೆಯಲ್ಲಿ ತಿರುಗಿ ಗುಜು ಗುಜು ಸದ್ದು)
ಯಾರೋ ಅಂದರು!
ಏನಂತೆ ?
ಯಾರೋ ಅಂದರು! ಯಾರೋ ಅಂದರು! ಯಾರೋ ಅಂದರು.

ಏನಂತೆ? ಏನಂತೆ? ಏನಂತೆ?

(ಪಾಪಣ್ಣ, ಪರಮಣ್ಣ ಎಂಬಿಬ್ಬರು ಪರಯುತ್ತ ಬರುವರು)

**ಪಾಪ.** — ಯಾರೋ ಅಂದರು!

**ಪರಮ.** — ಏನಂತೆ!

**ಪಾಪ.** — ಸೀರಿಗೆ ಹೋಪಾಗ ಸೂರಕ್ಕ ಮೊನ್ನೆ
ಜಾರಿ ಬಿದ್ದಳಂತೆ! ಸೀರಿಗೆ
ಜಾರಿ ಬಿದ್ದಳಂತೆ
ಸೀರೇನು ಕೆರೆಯೊಳಗೆ ಇದ್ದಿಲ್ಲವಂತೆ
ಹಾರೂಕೆ ಮನ್ಸಿಲ್ಲ ಹಾರ್ಕೊಂಡಳಂತೆ
ಸೀರೆಯು ನೆರಿಸಿಕ್ಕಿ ಮುಳುಗಿದಳಂತೆ
ಮೇಲೆತ್ತಿ ಕಾಂಬಾಗ ಬರಿ ಹೆಣವಂತೆ
ಜಾರೆಯ ಹೆಣಕಾಗಿ ಗೋಳಿಟ್ಟನಂತೆ

**ಪರ.** — ಹಾಂಗ್ಯಾರೋ ಅಂದರು; ಸುಪ್ಪೇನು ಸೂರೇನು!
ಪೋಲೀಸ್ರು ಬಂದ್ರಂತೆ; ಹಿಡ್ಕೊಂಡು ಹೋದ್ರಂತೆ
ಒಂದೊಂದು ತಿಳಿದೂ; ತಿಳಿದೋರು ಸುಮ್ನಾದ್ರು
ಸುಮ್ನಾದ್ರು ಯಾಕೇನೊ- ನೀ ಬಲ್ಲರೆ ಹೇಳೋ
ಬಲ್ಲವನೆ ಆಳು.

ಸೂರಕ್ಕ ಹಾದರ ಮಾಡಿದ್ಲೇ ನಿಜವರ?
ಹೊಡೆದದ್ದು ಹೌದಾರ? ತಿಳಿದಿದೆಯ ಏನಾರ?
ನೀ ಬಲ್ಲರೆ ಹೇಳು. ಹೊಡೆದಾನು ನಿಜವೆ?
ಅವಳು ಸತ್ತಾಳು ನಿಜವೆ? ನೀ ಬಲ್ಲರೆ ಹೇಳು!
ಬಲ್ಲವನೆ ಆಳು.

**ಪಾಪ** — ಸೂರಕ್ಕನ ಹಾದರ! ಜೀವಕೆ ಆಧಾರ
ಇನ್ನಾರೋ ಜತೆಯರ, ಸಿಕ್ಕಿದಳು ಅನಕರ.
ನಾ ಬಲ್ಲವನೆ ಎಲ್ಲ. ಅವ ಹೊಡೆದಾನು ನಿಜವು;
ಅವಳು ಸತ್ತಾಳು ಶವವು. ನಾ ಬಲ್ಲವನೆ ಎಲ್ಲ
ಸಂಶಯ ಇಲ್ಲ.

**ಪರ.**— ಸೂರಕ್ಕನ ಒಳಿಯಂತೆ: ಇದ್ದಂತೆ ಗೆಳೆಯಂತೆ.
ಹೆಸರಂತೆ ತಿಳಿದಂತೆ; ಪೆಟ್ಟೀಗೆ ಮರೆಯಂತೆ.
ನೀ ಬಲ್ಲರೆ ಹೇಳು. ಬಡಿವನೇ ಆಳು ?
ಅವನ್ ಮನೆ ಹಾಳು. ನೀ ಬಲ್ಲರೆ ಹೇಳು
ಬಲ್ಲವನೆ ಆಳು

**ಪಾಪ.**— ಸುಬ್ರಾಯಂಗ್ಯಾವನ; ಸೊಕ್ಕಲ್ಲಿ ಬಂದಾನ.
ಏರ‍್ಯಣ್ಣಾ ಬಿಟ್ಟಾನ ? ನಿನ್ಮಗನೇ ಏನ ?
ಯಾರವ ಸುಬ್ರಾಯ? ಯಾರಂದು ತಿಳಿದು.
ಒಂಣಂತೆ ಬೀಳಿದು, ಅಷ್ಟಂತೆ ಪರಮಯ್ಯ
ತಿಳಿವರೆ ಹೇಳಯ್ಯ!

**ಪರ.**— ನಾನಲ್ಲವೆ ಪರಮಯ್ಯ! ನನಗೆಲ್ಲಿ ಸುಬ್ರಾಯ!
ಗುಂಡ್ರಾಯ್ನ ಮಗರಾಯ ಇರಬೇಕು ನಾರಾಯ.
ನೀ ಬಲ್ಲರೆ ಹೇಳು. ಅಲ್ಲಿಗೆ ಬಂದಾನು ನಿಜವೇ ?
ಅವಳು ಹಾರಿದ್ದು ನಿಜವೆ ? ನೀ ಬಲ್ಲರೆ ಹೇಳು,
ಬಲ್ಲವನೆ ಆಳು.

**ಪಾಪ.**— ಗುಂಡ್ರಾಯರ ಮಗನೇನು! ಕಾಂಬೂಕೆ ಗುಂಡಾನ!!
ಕಣ್ಣಿಗೆ ಉಂಡನ್ನ ಒತ್ತಿರಬೇಕು ಮತ್ತೇನು!
ನಾ ಬಲ್ಲವನೆ ಎಲ್ಲ ಕೈ ಎತ್ತಿದಾ-ಬಿರ‍್ರ!
ಏಮರಾದ್ದು ಇವಕ್ಕನರ್ಮನಾ ಬಲ್ಲವನೆ ಎಲ್ಲ
ಸಂಸಯ ಇಲ್ಲ.

**ಪರ.**— ಕೆರೆಮಾರಿದ್ದಲ್ಲೇನು ? ಸಿಟ್ಟಿಗೆ ಒಲಿಯೋನು ?
ಕೊಂದವನೆ ಹಾಕ್ಯಾನ ? ಮಾಡೋದಿನ್ನೇನು.
ನೀ ಬಲ್ಲರೆ ಹೇಳು. ಹೆದ್ರೋಳು ಅವಳಲ್ಲ
ನಾಚೀಕೆ ಮೊದ್ಲಿಲ್ಲ. ನೀ ಬಲ್ಲರೆ ಹೇಳು.
ಬಲ್ಲವನೆ ಆಳು.

**ಪಾಪ.**— ಹಾಗಾದರೆ ನಾನಂಜೆ; ಕತೆಗುಟ್ಟು ಬ್ಯಾರಂಜೆ.
ಥಳಕಿನ ಗಜನಿಂಜೆ, ಉರುಳೀತು ಬಾಳೆ ಹಂಜೆ.
ನಾ ಬಲ್ಲವನೆ ಎಲ್ಲ. ಕತೆ ಗುಟ್ಟು ಇನ್ನುಂಟು

ಬಿಡಿಸೋಕೆ ಕಷ್ಟುಂಟು. ನಾ ಬಲ್ಲವನೆ ಎಲ್ಲ
ಸಂಸಯ ಇಲ್ಲ.

**ಪರ.**— ಅವಳು ಮಾಯಿಲಣ್ಣನ ಮಗಳಂದ್ರೆ ಹೇಳಬೇಕೇ ?
ಅವನು ಗುಂಡಣ್ಣನ ಮಗನೆಂದ್ರೆ ಕೇಳಬೇಕೆ ? || ಪ ||

**ಪಾಪ.**— ಕೆಸರಲ್ಲಿ ಕೈ ತೊಳೆವ ಜಾತಿಯವಳು,
ಕತ್ತಲಲ್ಲಿ ಮುತ್ತು ಸುರಿವ ಜಾಣೆಯವಳು!

**ಪರ.**— || ಪ ||

**ಪಾಪ.**— ಉಡ್ಮನೆ ಗಳದ ಲೆಕ್ಕ ಇವಂಗೆ ಬೇಕು.
ಹೊಲ್ಸನಲ್ಲಿ ಮೊಯದಿದ್ರೆ ಜೀವ ಹೋಕು.

**ಪರ.**— || ಪ ||

**ಪಾಪ.**— ಪ್ಯಾಟಿ, ಹಳ್ಳಿ—ಎಲ್ಲ ಒಂದೆ ಬಿರ್ಮಂಗೆ
ಹೆಣ್ಣು ಎಂಬ ಜಾತಿ ಆದ್ರೆ ಆಯ್ತುವಂಗೆ.

**ಪರ.**— || ಪ ||

**ಪಾಪ.**— ಕಿವಿಗ್ಬಿತ್ತು ಬಿರ್ಮನ ಸಂಸಾರ ಊರ್ಕ್ಕೇಲಂತ
ರಟ್ಟೆ ಹಿಡಿದು ಕೇಳಿದಳಂತೆ: "ಹೌದೇ"ನಂತ.

**ಪರ.**— || ಪ ||

**ಪಾಪ.**— ಹೆಣ್ಣು ನೀನು; ಇಷ್ಟು ಸೊಕ್ಕೆ! ಗಂಡನ್ ಕೇಳೋಕೆ ?
ಬೇಕಾದ್ದಾಂಗೆ ಇರೋಂವ ನಾನು; ಎಲೆ ಕಾಳ್ಬೆಕ್ಕೆ!

**ಪರ.**— || ಪ ||

**ಪಾಪ.**— "ನಿನ್ ಗಂಜಿ ತಿದ್ಕೊಂಡು ತಣ್ಣಗ್ ಬಿದ್ದಿರು.
ನನ್ ತಕ್ಕಿಗೆ ಬರೋದಾದ್ರೆ ಕುಡ್ಯೋಕೆ ಕಣ್ಣೀರು."

**ಪರ.**— || ಪ ||

**ಪಾಪ.**— ಅಂದೀಗಷ್ಟೆ ಮಾತು ನಡೀತು, ಸೂರು ತೆಪ್ಪಗೆ
ಗೆದ್ದು ಎದು ಬಿರ್ಮ ಹೋದ; ಡೌಲು ಬಿಮ್ಮಗೆ!

**ಪರ.**— || ಪ ||

**ಪಾಪ.**— ಒಂದು ಮಳೆಗಾಲ್ ಕಳೆಲಿಲ್ಲ. ಸೂರು ಚಿಗ್ರಿದ್ಲು,
ಕಣ್ಣಿನ ಕೊಪ್ಪಿಗೆ ಸಿಕ್ಕಿಬಿಟ್ಟು ಸುಬ್ಬು ಸೆಳೆದ್ಲು.

**ಪರ.**— || ಪ ||

**ಪಾಪ.**— ಊರಿನ ಕಣ್ಣೀ ಕೆಂಪಾಪ ಒಂದು ಸಂಜೀಗೆ,
ಬಿರ್ಮ ಬರ್ತಾನೆ ಮನೆಗಂದು, ಕೂಳಿನಾಸೆಗೆ.

**ಪರ.**— ॥ ಪ ॥

**ಪಾಪ.**— ಸೂರು ಜತೆಯಲ್ಲಿದ್ದ ಸುಬ್ಬು, ಜರ್ಬುಕೆದ್ರಿತ್ತು,
'ಒಳ್ಳೀ ಮಾತೀಲಿ ನಡೀದಿದ್ರೆ ಪ್ರಾಣಕ್ ಬಂದೀತು'

**ಪರ.**— ॥ ಪ ॥

**ಪಾಪ.**— ನಂಜಿನ ನಗೀ ಸೂಸಿಬಿಟ್ಟು ಸೂರು ಅಂದ್ಲು
"ಅವರವರ ದಾರಿ ಅವರಿಗಂದದ್ ಉಂಟೆ ಹೆಂಬ್ಲು !"

**ಪರ.**— ॥ ಪ ॥

**ಪಾಪ.**— ಪಿತ್ತ ಅಡರಿ ಹಸ್ತ ಎತ್ತಿದ; ಸುಬ್ಬುಗಾಗ್ತಿತ್ತು.
ಸರಕ್ ಬಂದ್ಲು ಸೂರು ತಡ್ಯೋಕೆ; ಕೆನ್ನೆಗೆರಗಿತು.

**ಪರ.**— ॥ ಪ ॥

**ಪಾಪ.**— ಒತ್ತಿಬಿದ್ದ ಹೆಣದ ಭಾರಕ್ ಬಿರ್ಮ ಕೆಳಕ್ಕೆ
ಸುಬ್ಬು ಬಾಲ ಮುಡ್ಚಿಬಿಟ್ಟ ಗುಡ್ಡದಾಚೀಗೆ.

**ಪರ.**— ॥ ಪ ॥

**ಪಾಪ.**— ಸೊಯು ಬಂದು ಕಾಂಬುವಾಗ ಯಾರೂ ಇದ್ದಿಲ್ಲ.
ಸೂರು ಮೈನ ಅಲುಗ್ಸಿ ಕಂಡ್ರೆ ಉಸಿರ ಸದ್ದಿಲ್ಲ.

**ಪಾಪ.**
**ಪರ.** )— ನೀರಿಗೆ ಜೈಲಿನ ಸೂರಕ್ಕ ಮೊನ್ನೆ
ಜಾರೀ ಆದಳಂತೆ । ನೀರಿಗೆ
ಜಾರೀ ಬಿದ್ದಳಂತೆ.
ನೀರೇನು ಅಷ್ಟೊಂದು ಇದ್ದಿಲ್ಲವಂತೆ
ಕೊಲೆ ಸುಳಿವು ತಪ್ಸೋಕೆ ಬಿರ್ಮಣ್ಣನಂತೆ
ಹೆಣವನ್ನೆ ನೀರಿಗೆ ಇಳ್ಸಿದನಂತೆ
ಸಾಲದ್ದಕ್ ಕಲ್ಲೊಂದ ಕಟ್ಟಿದ್ದಂತೆ

೪

(ಊರಲ್ಲಿ ಗುಜುಗುಜು ಸುದ್ದಿ ಪ್ರಸಾರವಾಗುವುದು)

ಯಾರೋ ಅಂದರು!

ಏನಂತ ?
ಯಾರೋ ಅಂದರು! ಯಾರೋ ಅಂದರು!
ಏನಂತೆ ? ಏನಂತೆ ?
ಯಾರೋ ಅಂದರು! ಯಾರೋ ಅಂದರು!
ಯಾರೋ ಅಂದರು!
ಏನಂತೆ ? ಏನಂತೆ ! ಏನಂತೆ ?

( ಈಸೂರ ಸಾಂಬಣ್ಣರಿಬ್ಬರು ಊರಿನ ಪ್ರಸ್ತಾಪದಲ್ಲಿ ಮಗ್ನರಾಗಿರುವರು. )

**ಈಸೂರ** — ಯಾರೋ ಅಂದರು!

**ಸಾಂಬಣ್ಣ** —ಏನಂತೆ ?

**ಈಸೂರ** — ಸೀರಿಗೆ ಪೈಲಿನ ಸೂರಕ್ಕ ಮೊನ್ನೆ
ಜಾರೇ ಆದ್ದಕ್ಕಂತೆ । ಸೀರಿಗೆ
ಕೊಂದೇ ಎಸೆದರಂತೆ
ಸೀರೇನು ಅಷ್ಟೊಂದು ಇದ್ದಿಲ್ಲವಂತೆ
ಕೊಂದವನ ಏದ್ಮಣ್ಣ ತಪ್ಪ್ಸೋಕಂತೆ
ಹೆಣವನ್ನ ಸೀರಿಗೆ ಹಾಕಿದ್ದಂತೆ
ಹಾಳಿದ್ದಕ್ಕೆ ಕಲ್ಲೊಂದ ಕಟ್ಟಿದ್ದಂತೆ

**ಸಾಂಬ.**— ಅಹಹ ಏನೂ ಮಾಡ್ತ್ಯಾರು । ಅಹಹ ಏನೂ ಮಾಡ್ತ್ಯಾರು
ಅಹಹ ಏನೂ ಮಾಡ್ತ್ಯಾರು । ಈ ಊರ ಜನಗಳು ॥ ಪ ॥
ಕಷ್ಟ ಕೊಂಡಾರು
ಹೆಣಸ ಮುಂದೆ ಹಾಲೂ ಕುಡ್ತಾರು
ವರ್ಷಕ್ಕೆ ಹತ್ತೆಂಟು
ಕಮ್ಮ್ಯಂದ್ರೆ ಅಷ್ಟಾರು ಹಣವುಂಟು.
ಏನಾರು ತುಬ್ಬುಂಟ ?
ಕೊಲ್ಲುಕೆ ಈಸಾರು ಬಿಸಾತುಂಟು!

**ಈಸೂರ.**— ॥ ಪ ॥
ಹೌದೇ ಹೌದಣ್ಣ
ಕೊಲ್ಲುಕೆ ಹೆದ್ರಿಕೆ ಯಾಕಣ್ಣ ?
ನಮ್ಮೂರ ಪೋಲೀಸು

ಧರ್ಮರಾಯ್ನ ಮರ್ಜಿನ ಆಫೀಸು.
ಹಿಡಿವರೆ ಕೊಂದವ್ನ
ತಿಳಿದಿದೆ ಸತ್ತವನು ಬಾರೆಂಬುದ್ನ

**ಸಾಂಬ.**— ॥ ಪ ॥
ಅಪ್ಪೃತವ ಮರ್ಜಣ್ಣ
ಈ ಊರ ಪೋಲಿಸ ಜನಕಣ್ಣ.
ಗೀತಿಯ ಪರಮಾತ್ಮ
ಮತ್ತೊಬ್ಬ ಗಾಂಧಿ ಮಹಾತ್ಮ
ಇವ್ರಿಗೆ ಮೇಲ್ಪಂಕ್ತಿ
ಆದ್ರಿಂದ ಬಂದಿದೆ ದುರ್ಗತಿ ॥
ಕೊಂದವ ಸತ್ತವ
ಇವರಿಗೆ ಒಂದೇ ಲೆಕ್ಕವ!
ಸಾವೆಂಬುದು ಮಾಯವು
ಆದ್ರಿಂದ ಕಿಸೆಗಿಷ್ಟು ಸಾಯವು.
ಊರಲ್ಲಿ ಅನ್ಯಾಯ
ಹೆಚ್ಚಾರೆ ಬದುಕುದು ಹ್ಯಾಂಗಯ್ಯ.

**ಸಾಂಬ.**— ಅಹಹ ಅವ್ರುಹಾಳಾಗ್ಲಿ । ಅಹಹ ಅವ್ರು ಹಾಳಾಗ್ಲಿ
ಅಹಹ ಅವ್ರು ಹಾಳಾಗ್ಲಿ । ಆದ್ರೆ ನಡದದ್ದೇನಿಲ್ಲಿ ?

**ಈಸೂರ**— ನಿಜವಂತೆ.
ನಿಜವಂತೆ ಸಾಂಬಣ್ಣ, ಸತ್ತದ್ದು ನಿಜವು
ಸತ್ಮೇಲೆ ಮಾತೇನು—ಊರೆಲ್ಲ ಸುದ್ದಿಯು

**ಸಾಂಬ.**— ಯಾಕೆ ಸೂರು ಸತ್ತಳಂತೆ; ಕೆರೆಹಾರಿ ಕೊಂಡಳೋ ?

**ಈಸೂರ**— ಕೆರೆಹಾರಿ ಕೊಂಡುದ್ದಲ್ಲ, ಕೊಂದು ನೂಕಿಬಿಟ್ಟರು.

**ಸಾಂಬ.**— ಕೊಂದು ಹಾಕಿ ಲಾಭವೇನು ? ಯಾರಂತೆ ಕೊಂದರು ?

**ಈಸೂರ**— ಬೇರಾರ್ನೊ ಕರ್ದಳೆಂದು ಬಿರ್ಮ್ರಂತೆ ಕೊಂದನು.

**ಸಾಂಬ.**— ಗಾಯವೇನು ಇಲ್ಲವಂತೆ. ಅದು ಹ್ಯಾಂಗೆ ಕೊಂದನೊ ?

**ಈಸೂರ**— ನೀರಿಲ್ದ ಕೆರೆಗಂತೆ ಕಲ್ಕಟ್ಟಿ ಬಿಟ್ಟನೋ

**ಸಾಂಬ.**— ಹಾಗಿಂದ್ರೆ ತಾನ್ಯಾಕೆ ನೇಣಿಟ್ಟು ಸತ್ತನೋ ?

**ಈಸೂರ**— ಅದು ಮಾತ್ರ ಕೇಳ್ಲಿಲ್ಲ; ನೀಣೆಟ್ಟು ಸತ್ತನೆ ?

**ಸಾಂಬ.**— ನಿಜವಂತೆ.

ನಿಜವಂತ ಈಸೂರ ಸತ್ತದ್ದು ನಿಜವು

ನಾನೆಂಬೆ ಕೊಂಡದ್ದು ಮೂರನೆ ಜನವು

**ಈಸೊರ**— ಹಾಂಗೇನು!

ಹಾಂಗೇನು ಸಾಂಬಣ್ಣ, ಎರ್ಡು ಹೆಣ ಸಾಯಲು

ಮೂರನೆಯವ್ರು ಬರ್ತ್ತಾರ, ಅದು ನಡು ಹಗಲು.

**ಸಾಂಬ.**— ಈಸೂರ.

ನೀ ಕೇಳು ಈಸೂರ ಇದು ಕಿವಿರ್ಗನಾಲು

ಮುಕ್ಕಿಂದ ಮುಳ್ಳನ್ನ ಕೀಳೋದೆ ಚಾಲು.

**ಈಸೊರ**— ಸಾಂಬಣ್ಣ,

ನೀ ಹೇಳು ಸಾಂಬಣ್ಣ ಅವರ ತಪಶೀಲು

ಬಾಡೀಗಿ ಜನತಂದು ಹೊಡಿತಾರ ಕೀಲು ?

**ಸಾಂಬ.**— ಓಹೋ ಸ್ವಾರಸ್ಯ ಉಂಟೇ ಕಥೆ

ಓಹೋ ಸ್ವಾರಸ್ಯ ಉಂಟೇ ಕಥೆ

**ಈಸೊರ**— ಸ್ವಾರಸ್ಯ ಇಲ್ಲದೆ ಕೊಲ್ತಿದ್ರು ಯಾಕ!

ಸ್ವಾರಸ್ಯ ಇಲ್ಲದೆ ಕೊಲ್ತಿದ್ರು ಯಾಕೆ ?

**ಸಾಂಬ.**— ನಸ್ಕಿಪಿ ತುರಿಸುತ್ತ ಕತೆ ಕೇಳೋಕೆ

ನಸ್ಕಿಪಿ ತುರಿಸುತ್ತ ಕತೆ ಕೇಳೋಕೆ.

**ಈಸೊರ**— ನನ್ನ ಬಾಯಿ ಹಾಂಗೇನೆ ಅದನ್ನೇಳೋಕೆ

ನನ್ನ ಬಾಯಿ ಹಾಂಗೇನೆ ಅದನ್ನೇಳೋಕೆ.

ನಿಮಗೆ ತಿಳಿವೆ ಸುಬ್ರಾಯು

ಅವನದ್ದೆ ಕಾರ್ಯ

**ಸಾಂಬ.**— ಗುಂಡಣ್ಣನ ಮಗ ಸುಬ್ಬು.

ಅವನಿಗೇನಬ್ಬ!

**ಈಸೊರ**— ಹೆಣ್ಣಿಗಾಗಾಯ್ತುಂವೆ

ಅವನದಕೆ ಮುಂದೆ

**ಸಾಂಬ.**— ಪಾಪವಂತೆ ಹೆಣ್ಣೊಂದ್ರೆ

ಜೀವಕ್ಕೆ ತೊಂದ್ರೆ

**ಈಸೂರ**-- ಅಷ್ಟಕ್ಕೆ ತೀರ್ಮಾನ
ಮಾಡ್ಬೇಡ ಸಾಂಬ

**ಸಾಂಬ.**— ನೀವ್ ಹೇಳಿ ಸಂಗ್ತೀನ
ಹೇಳಿದ್ರೆ ಒಯಿನ.

**ಈಸೂರ** — ಕತೆಗೆ ಮೂಲ ಆ ಸೂರು
ಕೇಳ್ಬೇಕೆ ಬೇರು ?

**ಸಾಂಬ.** — ಗರತಿ ಸೂಳೆ ಎಂದ್ರವಳೆ
ಕೆಸರಂಗಿನ ಜವಳೆ

**ಈಸೂರ** — ಸೂರು ಸೇಷರ ಮಸಲತ್ತು
ಊರಿಗೇ ಗೊತ್ತು

**ಸಾಂಬ.**— ಹಾದಿಗೆ ಬಂದ್ರಿ ನೀವೀಗ
ಅಪ್ಪ್ರೀಂಗಾಯ್ತು.

**ಸಾಂಬ.**— ಅವ ಮನೆಬಿಟ್ಟ ತಕ್ಷಣ
ಅಲ್ಲಿಯೇ ಸೇಸಣ್ಣ.

**ಈಸೂರ**— ಗಂಡಂಗೆ ಬಲುದಿನ
ಒಂದು ತಿಳಿದಣ್ಣ.

**ಸಾಂಬ.** — ಇಂಥೊಂದು ಜನವುಂಟೆ
ತಿಳಿದಿರಲು ತಂಟೆ!

**ಈಸೂರ** — ಗೊತ್ತಾಯ್ತು ಒಂದಿನ.
ಹೇಳೀದ ತಕ್ಷಣ:
'ನೀವಿಲ್ಲಿ ಬಂದ್ರಣ್ಣ
ಕುಟ್ಟ್ಯಾವೆ ಕೊಟ್ಟಣ'

**ಸಾಂಬ.**— ಗಂಡಂವ್ರೆ ಆ ಬಿರ್ಮ!
ಇರಬೇಕು ವರ್ಮ.
ಸೇಸಣ್ಣನ ಮ್ಯೆಚಮ್ಮ
ಸುಲಿದ್ರೇನೆ ಧರ್ಮ

**ಈಸೂರ**— ಮುದ್ದಿಲ್ಲವೆ ಸೇಸಂಗೆ ?
ಸೂರೂ ಹೆಂಗಂಗೆ
ಪೋಲಿಗಳ ಅಂತ್ರಗಂಗೆ
ಅವನ ಬಗಲಂಗೆ.

**ಸಾಂಬ.**— ಏನೇನು ಹೇಳಣ್ಣಾ
ಮುಂದಿನ ಬಣ್ಣಾ
ಆಪಂತಿ ಬಿಸ್ಸುಣ್ಣಾ
ಹೊಡಿಬೇಕಣ್ಣಾ

**ಈಸೂರ**— ಒಂದೀನ ಸುಬ್ರಾಯ
ಸ್ಯಾಸನ ಕಾರ್ಯ
ತಕ್ಕೊಂಡು ತಾತ್ಪರ್ಯ
ಕಂತಿದ್ದ ಸೂರ್ಯ
ಸೂರುಮನೆ ಮುಂದಂತೆ
ಕಾದೂ ನಿಂತ
ಹೆಸರು ಹಿಡಿದು ಕರದಂತೆ
'ಸೂರು' ಅಂತ.

**ಸಾಂಬ.**— ಬಂದಳೇನು ಅವಳಾಗ ?
ವಿಷ ಕಾಳಿಂಗ.
ಬಿರ‍್ಮಿಲ್ಲ ಗುಡಿಯೊಳಗೆ
ಬರಲಿಲ್ಲ ಬೇಗ....?

**ಈಸೂರ**— ಸಮಾಧಾನ ಮಾಡ್ಸಾಂಬ
ಬಿರ‍್ಮಿಲ್ಲ ಹೆಂಬ
ಕರದ್ದು ಕೇಳೀ, ಹಿಡಿಂಬ
ಬಂದಳು—ಜಂಭ.
'ಇಂದೀನ ಬಿರ‍್ಮಿಲ್ಲ'
ಎಂಬೀ ಸೊಲ್ಲ
ಸುಬ್ಬ್ಯಾಗೆ ತಟ್ಟಿಗಲ್ಲ
ಅಂದಳು ಮೆಲ್ಲ.

**ಸಾಂಬ.**— ಅಬ್ಬಬ್ಬ ಈ ಸೂರು
ಎಂಥಾ ಜೋರು.
ಹಿಡ್ಕೊಂಡು ತೊಗಲ್ಬಾರು
ಕೊಡ್ಬೇಕು ನೂರು.

**ಈಸೊರ**— ಕೇಳಿಲ್ಲಿ ಚಮತ್ಕಾರ!
ಆಯ್ತವತಾರ
ಬಿರ್‍ಮ ಬಂದ ಸರಸರ
ಏನದು ಅಬ್ಬರ!
ತೆಗ್ದೇಟಿಗ್ ಝೈಸಲು
ಸೂರು ಅಲ್ಲು;
ಸುಬ್ರಾಯ ಕಡಿತ್ಸಲ್ಲು,
ಬಿಟ್ಟರೆ ಚಲ್ಲು,
ಜೀವಕ್ಕೆ ಸಂಚುಕಾರ
ಅಲ್ಲೇ ನಿಂತರ.
ಇಬ್ಬರೂ ಉರಡ್ಯಾರ
ಅಬ್ಬಬ್ಬ ಅಬ್ಬರ

**ಸಾಂಬ.**— ಸುಬ್ರಾಯ್ನ ಅವತಾರ
ಅಲ್ಲೇ ಮುಗಿದರ
ಊರಿಗೇ ಉಪಕಾರ
ಆಗ್ತಿತ್ತು ಅಲ್ಲರ

**ಈಸೊರ**— ಹಣೆಯಾಗಿನ ಬರವಾರ
ಓದೂದ್ಯಾರ
ಬಿರ್‍ಮನ ಗಿರಾಚಾರ
ತಪ್ಸೂದ್ಯಾರ

**ಸಾಂಬ.**— ಅವನೇನು ಸತ್ತವನು
ನ್ಯಾಯವೇನ ?
ಕಲಿಕಾಲ್ದಲ್ಲಿ ಹೀಂಗೇನ
ದೇವರೇ ಮೌನ

ಈಸೊರ— ಸೇಸು ಸುಬ್ಬ ತಿಗ್ರಾರ್ತರ
ಏನ ಹೆಂಕಾರ
ಸತ್ತವರಿಬ್ಬರು ಸತ್ತರ ಏನ್ ಹಾಂಗಾರ!

ಸಾಂಬ.— ಸೀರಿಗೆಬ್ಬೈಲಿನ ಸೂರಕ್ಕ ಮೊನ್ನೆ
ಜಾರೀ ಆದ್ದಕ್ಕಂತೆ । ಗಂಡ
ಹಾರೀ ಕೊಂದನಂತೆ
ಹೆಂಡ್ತೀನ ಕೊಂದವ ಬಿರ್ಮಣ್ಣನಂತೆ
ಬಿರ್ಮನ ತಿಂದವ ಸುಬ್ರಾಯನಂತೆ
ಸೀರಿಗೆ ಹೆಣಹಾಕಿ ತಾ ಮಾಯನಂತೆ
ಇದಕ್ಕೆಲ್ಲ ಸೂಸ್ತ್ರವು ಸೇಸಪ್ಪಂದಂತೆ.

(ಪೂರದ ಗೋಳಿ ಮರದ ಕೆಳಗೆ ಇಬ್ಬರು ಮನುಷ್ಯರ ಛಾಯೆಗಳನ್ನು ಕಂಡು)

ಈಸೊರ— ಸುಮ್ನಿರು ಸಾಂಬಣ್ಣ, ಸುಮ್ನಿರು
ಅದ್ಯಾರೋ ಬರ್ತಾರೆ ಸುಮ್ನಿರು

ಸಾಂಬ.— ನಿಂಗ್ ಮರ್ಳು ಈಸೊರ ಈಗ್ಯಾರು
ಮುಸ್ಸಂಜೆಯಾಗೆ ಬರ್ತಾರೆ ಮರುಳರು !

ಈಸೊರ— ಅಲ್ಕಾಂಬುದಿಲ್ಲೇನು ಗೋಳಿಮರ ?
ಪ್ರೇತಕ್ಕೆ ಅಲ್ಲಂತೆ ಸಂಚಾರ

ಸಾಂಬ.— ಏನಾರೂ ಹೇಳ್ಬೇಡ ಸುಮ್ನಾರ
ಎದೆಯೊಳಗೆ ಚಳಿಯಣ್ಣ ಥರಥರ

ಈಸೊರ— ದೇವ್ರಾಣೆ ಅಲ್ಕಾಣು.... ಬಿರ್ಮ ಸೂರು
ಪ್ರೇತಾಗಿ ನೆರ್ಳಂತೆ ಬರ್ತಾರ

ಸಾಂಬ.— ದಮ್ಮಯ್ಯ ದಮ್ಮಯ್ಯ ಹೌದ್ಹರ
ಯಾಕಾರು ಬೇಕಿತ್ತು ಸುದ್ದಿಯಾರ

ಈಸೊರ— ಕಂಬಿ ಕೀಳು ದಮ್ಮಯ್ಯ, ರಾಮರಾಮ
ಬೆನ್ಸತ್ತಿ ಬರ್ತಾರೊ ಏನ್ ಕರ್ಮ

(ಪಲಾಯನ ಮಾಡುವರು.)

**೫**

(ತೆರೆಯಲ್ಲಿ ಮೊದಲಿಗಿಂತ ಗಟ್ಟಿಯಾಗಿ ಊರವರ ಗುಜು ಗುಜು ಎದ್ದಿದೆ)

ಯಾರೋ ಅಂದರು!
ಏನಂತೆ ?
ಯಾರೋ ಅಂದರು! ಯಾರೋ ಅಂದರು!
ಏನಂತೆ ? ಏನಂತೆ ?
ಯಾರೋ ಅಂದರು! ಯಾರೋ ಅಂದರು!
ಯಾರೋ ಅಂದರು!
ಏನಂತೆ ? ಏನಂತೆ ? ಏನಂತೆ ?

(ಚಿಕ್ಕಪ್ಪ ಕುಕ್ಕಪ್ಪ ಎಂಬಿಬ್ಬರು ಮಾತಾಡುತ್ತ ಬರುವರು)

**ಚಿಕ್ಕಪ್ಪ**— ಯಾರೋ ಅಂದರು!
**ಕುಕ್ಕಪ್ಪ**— ಏನಂತೆ ?
**ಚಿಕ್ಕ.**— ಸೀರಿಗೆ ಬೈಲಿನ ಸೂರಕ್ಕ ಮೊನ್ನೆ
ಜಾರೇ ಬಿದ್ದಕ್ಕಂತೆ. ಗಂಡ
ಹಾರೀಲಿ ಕೊಂದನಂತೆ.
ಹೆಂಡ್ತೀನ ಕೊಂದನ ಬಿದ್ರಣ್ಣನಂತೆ
ಬಿದ್ರನ ತಿಂದವ ಸುಬ್ರಾಯನಂತೆ
ಸೀರಿಗೆ ಹೆಣಹಾಕಿ ತಾ ಸಾಯುವಂತೆ.
ಇಷ್ಟೆಲ್ಲ ಸೂತ್ರವು ಸೇಸಪ್ಪಂದಂತೆ
ಸತ್ತವ್ರು ಪ್ರೇತಾಗಿ ಕಾಣ್ಸ್ಕೊಂಡರಂತೆ
ಸಾಂಬಣ್ಣ ಈಸೂರ ಬಾಲಮುಡ್ಕಿದ್ರಂತೆ
**ಕುಕ್ಕ.**— ಯಾವುದು ಸತ್ಯವೋ, ಯಾವುದು ಮಿತ್ಯವೋ ?
**ಚಿಕ್ಕ.**— 'ಹಾರೇದು ಮಿತ್ಯವು; ಕೊಂದದ್ ಸತ್ಯವು
ಸುಬ್ರಾಯ ಒಂದು ಇಬ್ರ ಕೊಂದದ್ ಅದುವೆ ನಿಜವು
**ಕುಕ್ಕ.**— ಯಾವುದು ಸತ್ಯವೋ, ಯಾವುದು ಮಿತ್ಯವೋ ?
**ಚಿಕ್ಕ.**— ಕೆರೇದು ಮಿತ್ಯವು, ಕೊಂದ್ದು ಸತ್ಯವು
ಹೆಣ ಬಿಡಗ್ಲಿ ಸಾಯುವಾದದ್ ಅದುವೆ ನಿಜವು
**ಕುಕ್ಕ.**— ಯಾವುದು ಸತ್ಯವೋ, ಯಾವುದು ಮಿತ್ಯವೋ ?

**ಚಿಕ್ಕ.**— ಚಾರೆ ಮಿತ್ಯವು, ಉಳಿದ್ದು ಸತ್ಯವು
ಸೇಸುಗಾಗಿ ಸುಬ್ಬು ಬಂದು ಕರದ್ದು ಸತ್ಯವು
**ಕುಕ್ಕ.**— ಯಾವುದು ಸತ್ಯವು, ಯಾವುದು ಮಿತ್ಯವು ?
**ಚಿಕ್ಕ.**— ಎಲ್ಲ ಮಿತ್ಯವು, ಇಷ್ಟು ಸತ್ಯವು
ಸಾಂಬು ಈಸೊರ ಪ್ರೇತಕಂಡು ಓಡಿದ್ದು ನಿಜವು

(ದೂರದಿಂದ ಆ ಮಾರ್ಗವಾಗಿ ಅತ್ತೆಯ ಮನೆಯಿಂದ ಹಿಂದಿರುಗುವ ಬಿರ್ಮ ಮತ್ತು ಅವನ ಹೆಂಡತಿ ಸೂರು ಬರುವರು)

**ಕುಕ್ಕ.**— ಯಾವುದು ಸತ್ಯವೋ, ಯಾವುದು ಮಿತ್ಯವೋ ?
**ಚಿಕ್ಕ.**— ಕೊಲೆಯು ಮಿತ್ಯವು, ಸಾಯ್ದಿದ್ದು ಸತ್ಯವು ?
ಬಿರ್ಮ್ಮ ಸೂರು ಬರೋದು ನೋಡು, ಹಗಲು ಸತ್ಯವು.
**ಸೂರು**— ತವರಂಗೆ ನಾಕ್ದಿನ ಇರ್ಬ್ಬೋದಿತ್ತು
ನಿಮುಗೇ ಅವಸರ
ಹುಣ್ಣಿಮೆ ಪಾಡ್ಯಕ್ಕೆ ಬರ್ಬ್ಬೋದಿತ್ತು
ಊರೊಳಗೆ ಬ್ಯಾಸರ
**ಬಿರ್ಮ**— ಮಾವನ ಮನ್ಯಂಗೆ ಏಸ್ದಿನ ಇಪ್ಪುದು
ಮೂಲ್ಗೇಣಿ ಆಸ್ತೀಯ ?
ಹೆಂಡ್ತಿಯ ತವರಂದು ಚಾವಡಿಗೆ ಅಂಟಿದ್ರೆ
ಮಾನಕ್ಕೆ ಜಾಸ್ತಿಯ ?
**ಸೂರು**— ನಮ್ಮವ್ರು ಅಂದ್ಮೇಲೆ ಅದೇನು ಭೇದವೋ
ಊರವರು ಅಂತಾರ ?
ಊರವರ ಬಾಯೊಗೆ ಬೀಗ್ಯಾರು ಹಾಕೋರು
ಹೇಳೋರು ಹೇಳ್ತಾರ.
**ಬಿರ್ಮ**— ಗದ್ದೇಲಿ ಪೈರೆಲ್ಲ ಹಣ್ಣಾಗಿ ಹೊನ್ನಾಗಿ
ಹಕ್ಕ್ಯೆಲ್ಲ ತಿಂತಾವೆ
ಮುಂಗಾರು ಮಳೆಯಂತು ಗಡಗುಟ್ಟಿ ಬಂದರೆ
ಅಲ್ಲೇನೆ ಬತ್ತಾವು.
**ಸೂರು**— ಅದು ಒಂದು ಹೌದೆಂಬೆ; ಈಸ್ದಿನ ಬಿಟ್ಟಿದ್ದೆ
ದೇವ್ರದ್ದು ದೊಡ್ಡಂತೆ

ಅಬ್ಬೀಯ ಒತ್ತಾಯ, ತಪ್ಪುಸ್ತೆ ಬಂದೇನು
ನಾಳೀಗೆ ಕೊಯ್ಲಂತೆ

**ಬಿರ್‍ಮ—** ಕತ್ತೀಗೆ ಹಲ್‌ಹಾಕ್ಸಿ ಸಂಜೀನೆ ತರ್ತೀನಿ
ಊರೊಳಗಿನ ಎಲ್ಲಾರ,
ಕೊಯ್ಲಾಯ್ತು ತಿರಿಕಟ್ಟಿ ಉಳಿದದ್ದು ನಮ್ಮದು
ಕಂಡವರು ನಗ್ತಾರೆ

**ಸೂರು—** ಅವರು ನಕ್ರಂದ್ ಹೇಳ್ತೀರ, ನಕ್ಕರೆ ನಕ್ಕೊಳ್ಳಿ
ಸೂರ್ಯಂಗೆ ಉಗಿತಾರ
ಉಗಿದುಗಿದು ಕಡೆಗಂಟ, ತಮ್ಮೋರಿ ಎಂಜ್ಲಂತೆ
ಊರವರ ಹಣೆಬಾರ

(ಹಾಗೇನೆ ತೆರಳುವರು)

**ಕುಕ್ಕ—** ಎಲ್ಲಿಲ್ಲ ಕತೆಯೊಂದು ಹುಟ್ಟಿತು ಎಲೆ ಕುಕ್ಕ
ಇಂಥೊಂದು ಚಮತ್ಕಾರ ಉಂಟೇನ?

**ಚಿಕ್ಕ—** ಇಷ್ಟೆಲ್ಲ ಜನರು ಹೇಳಿದ್ದು ಸುಳ್ಳೇ ?

**ಕುಕ್ಕ—** ಇಂಥೊಂದು ಚಮತ್ಕಾರ ಉಂಟೇನ!

**ಚಿಕ್ಕ—** ಅವ್ರಂತು ಇಬ್ರು ಸತ್ತದ್ದು ಸುಳ್ಳೆ ?

**ಕುಕ್ಕ—** ಇಂಥೊಂದು ಚಮತ್ಕಾರ ಉಂಟೇನ!

**ಚಿಕ್ಕ—** ಸುಬ್ರಾಯ ಅವರ ಕೊಂವದ್ದು ಸುಳ್ಳೆ ?

**ಕುಕ್ಕ—** ಇಂಥೊಂದು ಚಮತ್ಕಾರ ಉಂಟೇನ!

**ಚಿಕ್ಕ—** ಸೇಸಣ್ಣ ಇಷ್ಟು ಮಾಡ್ಸಿದ್ದು ಸುಳ್ಳೆ ?

**ಕುಕ್ಕ—** ಇಂಥೊಂದು ಚಮತ್ಕಾರ ಉಂಟೇನ!

**ಚಿಕ್ಕ—** ಏನಾದು ಸುಳ್ಳಿರ್ಲಿ, ಇದಂತು ಸುಳ್ಳಲ್ಲ

**ಕುಕ್ಕ—** ಗಾಳಿಯಿಲ್ದೆ ಬರಿ ಎಲೆ ಅಲುಗೀತಾ ?

**ಚಿಕ್ಕ—** ಅವರಿಬ್ರ ನಡೆ ಸಮ ಇಲ್ಲೆಂಬುದು ನಿಜವು

**ಕುಕ್ಕ—** ಗಾಳಿಯಿಲ್ದೆ ಬರಿ ಎಲೆ ಅಲುಗೀತಾ ?

**ಚಿಕ್ಕ—** ಸೂರಕ್ಕನ ನಂಬ್ಲಾರೆ, ಬಿರ್‍ಮಣ್ಣ ಅಂಥೋನೆ

**ಕುಕ್ಕ—** ಗಾಳಿಯಿಲ್ದೆ ಬರಿ ಎಲೆ ಅಲುಗೀತಾ ?

**ಚಿಕ್ಕ—** ಗಂಡ ಹೆಂಡ್ರಿಗೆ ಅಷ್ಟಷ್ಟೆ—ಅದಂತು ಸತ್ಯವು

**ಕುಕ್ಕ**— ಗಾಳಿಯಿಲ್ದೆ ಒರಿ ಎಲೆ ಅಲುಗೀತಾ ?

**ಚಿಕ್ಕ**— ಆದದ್ದು ಅಲ್ಲಾರು, ಆಪುದು ನಿಜವಂತೆ:

**ಕುಕ್ಕ**— ಗಾಳಿಯಿಲ್ದೆ ಬರಿ ಎಲೆ ಅಲುಗೀತಾ ?

**ಚಿಕ್ಕ**— ಗಾಳಿಯಿಲ್ದೆ ಬರಿ ಎಲೆ ಅಲುಗೀತಾ ?
ನೀರಲ್ಲಿ ಗುಂಡ್ಕಲ್ಲು ತೇಲೀತಾ ?
ಎಣ್ಣೆಗು ನೀಗೇಗೂ ಕೂಡಿತಾ ?

—o—

## ಪಾತ್ರ ಪರಿಚಯ



**ಯಾಜ್ಞವಲ್ಕ್ಯ, ಕೃಷ್ಣ, ಅರ್ಜುನ, ಬುದ್ಧ ಜರತುಷ್ಟ್ರ, ಯೇಸು ಮೊದಲಾದ** ಮಹಾ ವಿಭೂತಿಗಳು.

**ಪಾದ್ರಿ, ಬ್ರಾಹ್ಮಣ, ಮುಲ್ಲ, ಬಿಕ್ಕು** ಮೊದಲಾದ ಕಾಲಾನಂತರದ ಶಿಷ್ಯಗಣ.

**ವಿಜ್ಞಾನಿ**—ನವಯುಗದ ಸಂಕೇತವೆನಿಸಿದ ಸಂಶಯಾತ್ಮ.

**ಕಾಲಪುರುಷ**— ವಿಶ್ವದ ನಿರ್ಮಾಣ, ಪ್ರಗತಿ, ಲಯಗಳಿಗೆ ಕಾರಣವಾದ ಸರ್ವತಂತ್ರ ಸ್ವತಂತ್ರ; ಹಳೆಯ ಯುಗವು ತನ್ನ ಕೆಲಸ ಮಾಡಿತೆಂದರೆ, ಅದನ್ನಳಿಸಿಬಿಟ್ಟು ಹೊಸತನ್ನು ಹರಡುವ ಮಾಯಗಾರ.



೧

[ಅಂಧಕಾರದ ಭೀಷಣ ಚಿತ್ರ. ಅನಂತವಾಗಿ ಕಾಣಿಸುವ ರಂಗಭೂಮಿ. ಬೆಳಕಂತು ಇಲ್ಲ—ಜತೆಯಲ್ಲಿ ಸದ್ದೂ ಇಲ್ಲ. ಜೀವಕೋಟಿಯ ಸುಳಿವೇ ಇಲ್ಲ. ಜೀವಿಗಳಂತೆ ನಿರ್ಜೀವಿಗಳೂ ಇಲ್ಲ. ಆದಿಯ ಕತ್ತಲಿಯೇ ಇದು.]

**ನೇಪಥ್ಯ ಗಾನ** ರಾಗ—ಬಿಭಾಸ

ಎಲ್ಲೆಲ್ಲು ಏನಿಲ್ಲ. ತಮವೆಂಬ ಹೆಬ್ಬಾವು
ಎಲ್ಲವನು ತಿಂದಂತೆ, ತಿಂದು ತೇಗುತೆ ತಾನು
ಜಡವಾಗಿ ಜೀವಕಳೆ ತೊರೆದು ಮಲಗಿರುವ
ಮಬ್ಬಿನಂದದಿ ಕಾಂಬ ಘೋರವೇನು!

ಇದ್ದುದೇ ಏನಿಲ್ಲ, ಬಂದಿಹುದು ಏನಿಲ್ಲ,
ತಿಂದವರು ಯಾರಿಲ್ಲ, ಎಲ್ಲ ಬರಿ ಭ್ರಮೆಯಲ್ಲ,
ಭ್ರಮೆಯೆಂಬುದೂ ಇಲ್ಲ! ಇಲ್ಲವೆಂಬುದೆ ಒಂದು
ಕನಸಾಗಿ ತನ್ನನ್ನೆ ಕಾಣುತಿಹುದು.

ಕಾಳಕತ್ತಲೆ ತಾನು ಎತ್ತೆತ್ತಲೂ ಹರಡಿ
ನೆಲವಾಗಿ ಮಲಗಿದ್ದು, ಗಿಡವಾಗಿ ಚಿಗುರಿದ್ದು,
ನೆಲದೊಳಗೆ ಬೇರಿಟ್ಟು, ಗಗನವನು ಮುತ್ತಿಟ್ಟು
ಎಡೆಯೆಲ್ಲ ನುಗ್ಗುತಲಿ, ತಾನೆ ತಾನು.

ಇರುಳೆಂದರೆಲ್ಲುಂಟು? ಬೆಳಕಿದ್ದರಿರುಳಲ್ತೆ?
ಬೆಳಕ ಬಲ್ಲವರಾರು? ಇರುಳು ಎಂಬುದು ಏಕೆ?
ತಮವದೆಂಬುದು ಏಕೆ? ಇಲ್ಲವೆಂಬುದು ಏಕೆ?
ಇದ್ದುದರ ಅರಿವನ್ನೆ ಬಲ್ಲರಾರು?

ನಾನಿಲ್ಲ, ನೀನಿಲ್ಲ; ಇನ್ನಿಲ್ಲ, ಮುನ್ನಿಲ್ಲ.
ನಿಲ್ಲುತಿರೆ ನೆಲವಿಲ್ಲ, ನಿಲ್ಲಿಸುವ ಜೀವಿಲ್ಲ;
ಉಂಟೆನುವ ಸುಳಿವಿಲ್ಲ, ಸೃಷ್ಟಿ ಕರ್ತನೆ ಇಲ್ಲ;
ಇಲ್ಲವೆನ್ನುವ ಸೊಲ್ಲ ಇಡುವನಿಲ್ಲ.

[ಈ ಶೂನ್ಯ ಪ್ರಪಂಚದ ಒಂದು ಅಂಚಿನಲ್ಲಿ ಎಲ್ಲಿಂದಲೋ ಬೆಳಕಿನ ತೆರೆಯೊಂದು ಮೆಲ್ಲಗೆ ಹೊಳೆಯುತೊಡಗುವುದು. ಇದೇ ಉಷೆಯಿರಬೇಕು. ತುಸು ಸಮಯ ಕಳೆಯುತ್ತ ಬರಲು ಈ ಉಷೆಯ ತೆರೆಯ ಅಂಚಿನಲ್ಲಿ ಹಿರಣ್ಯ ಗರ್ಭವೊಂದು ಉದಯಿಸುವುದು.]

**ನೇ. ಗಾನ** ರಾಗ—ಭೂಪ

ಬೆಳಕೊಂದು ಜನಿಸುತಿದೆ. ಬೆಳಕುಗೊಳ್ಳುವ ವಸ್ತು,
ಬೆಳಕ ಕಾಣುವ ಕಣ್ಣು, ಬೆಳಕಿನೊಂದಿಗೆ ಹುಟ್ಟಿ
ಚೆಲುವಾಂತ ಚಿತ್ರವನು, ನಲವಾಂತ ಜೀವವನು—
ಮಿಗುವಂತೆ, ಉಲಿವಂತೆ ತೋರುತಿಹವು.

ಅಂಬರದ ಅಂಚಿನಲಿ ಶಿಶುವೊಂದು ಮೊಳೆಯುತಿದೆ.
ನಾದನೋಟಗಳೆಲ್ಲ ಅಲ್ಲಲ್ಲೊ ಏಳುತಿವೆ!
ಕತ್ತಲೆಯು, ಶೂನ್ಯತೆಯು, ಇಲ್ಲೆಂಬುದರ ಪರೆಯು
ಕಿತ್ತೊಗೆವ ಬಲು ಸಿರಿಯ ಸಾಸದುದಯ.

ದೆಸೆಯ ಹೊಂಬಣ್ಣದಲಿ ಜ್ವಲಿಸಿ ಮಿರುಗುತಲಿಹುದು
ಉಷೆಯು ಸೀರೆಯ ಹೊಳಪು, ನೆರಳಾಗಿ ಬಿದ್ದಿರುವ
ನೆಲದ ಅಂಚನು ಬೆಳಗಿ, ಇಲ್ಲದನು ಉಂಟೆನಲು
ನಗುವೊಂದು ಮೊಳಗುತಿದೆ ಭರದಿ ಉಕ್ಕಿ

ಚಿನ್ನದಂಬರವೊಡೆದು, ಚೆನ್ನ ಸೊಗಸಿನ ಅಂಡ
ತನ್ನೊಳಗೆ ತಾ ಹುಟ್ಟಿ, ಕಂಗಳಿಗೆ ಕಾಂಬಂತೆ

ನೆಲವಾಗಿ, ನೀರಾಗಿ, ಕನಸಾಗಿ, ನೆನಸಾಗಿ
ಜೀವಭಾವದ ಸಕಲ ರೂಪವಾಗಿ.

[ಪ್ರಪಂಚವು ಅರಳಿದೆ. ಎಲ್ಲೆಲ್ಲು ಜೀವಕೋಟಿಗಳ ಸುಳಿದಾಟವೂ, ನಗು ಚೇತನಗಳೂ ಕಾಣಿಸುವುವು. ಅವುಗಳಲ್ಲಿ ಹಿರಿಯ ಜೀವಿಗಳು, ಕಿರಿಯ ಜೀವಿಗಳೆಂದು ನೂರಾರು ರೂಪುಗಳೂ, ಲೀಲೆಗಳೂ ತೋರುವುವು.]

**ನೇ. ಗಾನ**

ಅಲ್ಲಿ ಕಾಂಬಿರಿ ದೇವ ದೇವಾಧಿ ದೇವರನು
ಅಲ್ಲಿ ಕಾಂಬಿರಿ ಜೀವಜೀವಾನು ಕೋಟಿಯನು
ಅಲ್ಲಿ ಕಾಂಬರಿ ಇಂದು ವಿಧವಿಧದ ಬಣ್ಣವನು,
ಭಾವಗಳ, ಬೆಡಗುಗಳ ಮೇಳಗಳನು.

'ಇಲ್ಲ' ವೆಂಬುದು ಎಲ್ಲ 'ಇಹುದು' ಎಂದಾಗುತಿದೆ
ಶಾಂತಮಯ ನೀರವದ ಸಾವು ಶೂನ್ಯಗಳಿಲ್ಲ
ಜಾಲಗಳು, ಲೀಲೆಗಳು ಹರಿದು ಕಳಚುತೆ ಬಿದ್ದ
ಬೆಳಕು ಬಲುಮೊಗಳಿಟ್ಟು ಉಕ್ಕುತಿಹವು.

**ನೇಪಥ್ಯ ಮೇಳ**

ಹರಿಯುತಿಹವು—ಉಕ್ಕುತಿಹವು—ಸೊಕ್ಕುತಿಹವು.
ಹಿರಿದಾಗಿ ಹಾರಾಡಿ, ಸರ್ವವೂ ತಾವಾಗಿ
ನರ್ತನದ ನಲಿವಿನಲಿ ಚಿಮ್ಮಿ ನೆಗೆದು ॥
ಹರಿಯುತಿಹವು.... ॥

[ಈ ನವೀನ ರಂಗದಲ್ಲಿ ಯಾಜ್ಞ್ಯವಲ್ಕ್ಯನ ಭವ್ಯಮೂರ್ತಿಯು ಕಾಣಿಸಿಕೊಳ್ಳುವುದು. ನಿಸರ್ಗದ ಬೆಡಗಿನಿಂದ ಮುಗ್ಧನಾಗಿ ಮೈಮರೆವಂತೆ, ಮೆಲುನಡೆಯಿಂದ ಬರುವನು.]

**ಯಾಜ್ಞ್ಯವಲ್ಕ್ಯ—** ರಾಗ—ದುರ್ಗಾ

ಎಲ್ಲೆಲ್ಲು ಪರಮಾತ್ಮನಾಟ ನೋಡು
ಎಲ್ಲೆಲ್ಲು ಪರಮಾತ್ಮನೋಟ ನೋಡು
ಎಲ್ಲೆಲ್ಲು ಆನಂದ ಪುಳಕಾಟ ನೋಡು.

ಇಂದ್ರನಿವ ನಭದಿಂದ ಕರೆಯುವನು ಮಳೆಗಳನು
ಚಂದಿರನು ಓಷಧಿಯ ಸಂಸಾರ ಬೆಳೆಯುವನು
ಪೂಷ, ಮಿತ್ರರದೆಲ್ಲ ಜಗದ ಸೊಗಸನು ಬಯಸಿ
ಶ್ರಮಿಸಿ ದಣಿಯುತಲಿಹರು ಬಿಡುವ ಮರೆತು.

ಉದಿಸಿ ಗಗನದ ತುತ್ತ ತುದಿಯನ್ನೆ ಸೇರುತಲಿ
ಸಂಜೆಯಲಿ ಮುಳುಗುವನು ರವಿರಾಯ ಚೆಲುವಿನಲಿ.
ಇಳೆಯ ಹುಟ್ಟಿಸೆ ಬ್ರಹ್ಮ, ಕಾಯ್ದು ಮೆರೆಯಿಸೆ ವಿಷ್ಣು
ಅಳಿಗಾಲವನು ತರಲು ಹರನು ಇಹರು.

ಕಾಂಬ ಕಣ್ಣಿಗೆ ಇದುವೆ ಸೋಜಿಗದ ನಾಟಕವು;
ನಾ ಬೇರೆ 'ಅದು ಬೇರೆ' ಗೈದುತೋರುವ ಮಾಯೆ!
ಪರಬ್ರಹ್ಮನೆಂಬೊಂದು ದೇದೀಪ್ಯ ಜ್ಯೋತಿಯಿದು,
ಸಾಗರದಿ ಪ್ರತಿಫಲಿಪ ಬಿಂಬಕೋಟಿ.

ಅವನೊಳಗೆ ನಾವಿದ್ದು, ಅದನಿಂದೆ ಬದುಕಿದ್ದು
ಅವನೆ ನಮ್ಮಯ ನೆಲೆಯು ಎಂಬುದನೆ ಮರೆಯುತಲಿ
ಇಲ್ಲದಿಹ ಕನಸೊಂದ ಕಣ್ಮುಂದೆ ನಿಲ್ಲಿಸುತೆ
ನಾಟರದ ಬೇನೆಯೊಳು ಬಳಲಲೇಕೆ ?

[ತೆಳ್ಳಗಿನ ಪರೆಯೊಂದು ಸರಿದುಬಂದು ಈ ಎಲ್ಲ ದೃಶ್ಯಗಳನ್ನು ಮಬ್ಬಿನಲ್ಲಿ ಕೆಡೆದು ಬಿಡುವುದು.]

೨

**ನೇ. ಗಾನ** ರಾಗ—ಮಾಂಡ್

ಹೆಜ್ಜೆಗೆಜ್ಜೆ ದನಿಯ ಮಾಡಿ ಬರುತಿದಾನೆ
ನೆನಪಿಗೊಂದು ತೆರೆಯ ಹಾಸಿ ಸರಿಯುತಾನೆ
ತನ್ನ ಬೆಡಗನೆಲ್ಲ ತೋರಿ ನಡೆಯುತಾನೆ
ನಿನ್ನೆ ದಿನವನಳಿಸಿಬಿಟ್ಟು ಸರಿಯುತಾನೆ

ಕಾಲವೆಂಬ ಲೀಲೆ ನೀನು
ಮೇಲುಕೀಳು ಒಂದೆ ಸಮನು
ಕಾಲತುಳಿತದೆಮ್ಮ ಜಗವ
ಕುಣಿಸಿ ದಣಿಸಿ ಬಿಡುವೆಯೇನು
। ಹೆಜ್ಜೆಗೆಜ್ಜೆ ದನಿಯಮಾಡಿ! ।

[ಮೇಳವು ಮುಗಿಯಲು 'ಲೀಲಾಪುರುಷನಾದ ಕಾಲನು ನರ್ತಿಸುತ್ತ ಬರುವನು. ತಾನೇ ತನ್ನ ಕಾಲಚಕ್ರವನ್ನು ಸೃಷ್ಟಿಸುವಂತೆ ತೋರಿ ಹಾರುವನು]

[ಹಿಂದೆ ಕವಿದ ಮಬ್ಬು ಸರಿದು ನವೀನ ಸೃಷ್ಟಿಯೊಂದು ಕಾಣಿಸಿ ನಿಂತಿದೆ. ಮುಸುಕುಮುಸುಕಾಗಿ ಕುರುಕ್ಷೇತ್ರದ ರಣಭೂಮಿ ಕಾಣಿಸುತ್ತಿದೆ. ಯುದ್ಧಾತುರ ಸೇನೆಗಳು ಯಾವೆಡೆಯಲ್ಲೂ ಕಾಣುತ್ತಿವೆ. ನಡುವೆ ಕೃಷ್ಣಾರ್ಜುನರ ಭವ್ಯ ಮೂರ್ತಿಗಳಿವೆ.]

**ನೇ. ಗಾನ** ರಾಗ—ಭೈರವ

ಶಾಂತ ತಪಸಿನ ಯುಗವು ಸರಿದು ಮೂಲೆಯ ಸೇರಿ
ಹೊನ್ನು ಮಣ್ಣಿನ ಯುಗವು ಒತ್ತಿ ಹರಿಯುತಲಿಹುದು;
ಜೀವನದ ನೌಕೆಯನು ಈ ಭವದ ಕಡಲೊಳಗೆ
ಚೆನ್ನ ದಾಟಿಸಬಲ್ಲ ನರನ ಕಾಣೆ.

ಅಣುರೇಣು ತೃಣಕಾಷ್ಠದೊಳು ತನ್ನ ಬಿಂಬವನು
ಅರಸಿ, ತನ್ನಯ ಪೂಜೆ ಜಗದ ಸೇವೆಯು ಎಂದು

ಮೆರೆದ ತಾಪಸರೆಲ್ಲ, ಸರಿದು ಹೋದರು ಹಿಂದೆ,
ತಿಳಿವು ಚೆಲುವುಗಳೆಲ್ಲ ಮಾಯವಿಂದು.

ಮನದೊಳಗೆ ಮಾರ್ದನಿಯನೀವ ಸಾಮದಗಾನ
ಒಡಲ ಬಾಯಾರಿಕೆಯ, ತಣಿಪ ತತ್ವಜ್ಞಾನ
ಸಕಲವೂ ಮುಳುಗಿದುವು—ರಣದುಂದುಭಿಯಸಿನದ,
ಎಸೆವ ಕೂರಂಬುಗಳ ಠೇಂಕಾರದಿ.

ಕೃತ ತ್ರೇತಗಳು ಸರಿದು ದ್ವಾಪರವು ಮುರಿಯುತಿದೆ,
ಕುರುಭೂಮಿಯೊಳು ಇಂದು ದ್ವಾಪರನ ಮಸಣವಿದೆ.
ಭುಗಿಭುಗಿಲು ಭುಗಿಲೆಂಬ ದ್ವೇಷಕ್ರೌರ್ಯಗಳೆಲ್ಲ
ನರನ ಸದ್ಬುದ್ಧಿಯನೆ ಅರೆಯುತಿಹವು.

ನೋಡಲ್ಲಿ—ಕುರುಸೇನೆ! ಪಾಂಡವರ ಪಿರಿಸೇನೆ!
ಮರುಳು ಮಬ್ಬಿಗೆ ಸಿಲುಕಿ ನುಚ್ಚಾಗೆ ನೆರೆದಿಹವು;
ಸ್ವಾರ್ಥ ಸೊಕ್ಕುಗಳಿಂದ ಮತಿಯ ತೋಲವ ಕೆಡಿಸಿ
ಸಿಂತ ನೆಲೆಯನೆ ಮರೆತು ಸಿಡಿಯುತಿಹವು.

ಕೆಚ್ಚು, ಕೊಬ್ಬಿನ ತೆರೆಯ ಇಣಿಕಿ ನೋಡೆಲೊ, ನೋಡು—
ನೀಲಮೇಘಶ್ಯಾಮ ನಡುವಿನಲಿ ನಿಂದಿಹನು,
ದಿವ್ಯಪದಯುಗಪಿಡಿದು ಕರ್ಣಗಂಗೆ ಜಲದಿಂದ
ಅಭಿಷೇಕ ಗೈಯುತ್ತ ಪಾರ್ಥನಿಹನು.

ತನ್ನವರು, ಹೆರವರು, ವೈರಿಗಳು, ಬಂಧುಗಳು
ಎಂಬ ಮಾಯೆಗೆ ಬಗ್ಗಿ ಕರ್ತವ್ಯವನು ಮರೆತು
ದಿಙ್ಮೂಢನಾಗುತಲಿ ತನ್ನರಿವ ಮರೆದಿಹನ
ಕರುಣೆಯೊಳು ಕಾಣುವನು ಮಧುಸೂದನ.

**ಶ್ರೀಕೃಷ್ಣ—**

ಕರ್ತವ್ಯವೇ ಒಂದು ಮಾನವನ ನಿಜಧರ್ಮ.
ಮಾಡುವುದು, ತೀಡುವುದು, ಮಾಡುತ್ತ ಮಡಿಯುವುದು,
ಗೈದುದರ ಫಲಗಳನು ಬಯಸದಿರುವುದು, ನೋಡು,
ಈಡಿಲ್ಲದಿಹ ಯೋಗ— ಯೋಗಿಯಾಗು.

ಎಲ್ಲ ನಾನಲ್ಲವೆ! ಕೊಲ್ಲುವವರಾರುಂಟು ?
ಕೊಲಿಸಿಕೊಳ್ಳುವರಾರು ? ಸಾವುನೋವುಗಳೆಲ್ಲಿ ?
ಫಲವ ಬೇಡದೆ ದುಡಿವ ತತ್ವದಲ್ಲುಂಟಿಲ್ಲ;
ಮಾನವಗೆ ಕರ್ತವ್ಯವೊಂದೆ ನಂಟು

**ನೇ. ಗಾನ**

ಗಾಂಡೀವಿ ನಿಂದಿಹನು, ಹಿರಿಬಿಲ್ಲ ಹಿಡಿದಿಹನು
ಕಲಿವೀರನಂದದಲಿ ಕುರುಪಡೆಯ ಸುಡಲಿಹನು,
ತನ್ನವರು, ಹೆರವರು ಎಂಬ ಮಮತೆಯ ಕಡಿದು
ಗೀತೆಯಾಣತಿ ನಡೆಸ ಸಾಗುತಿಹನು.

[ತಿರುಗಿ ಕಾಲತೆರೆಯು ಬಂದು' ಈ ದೃಶ್ಯವನ್ನು ಮುಚ್ಚಿಕೊಳ್ಳುವುದು.]

೩

**ನೇ. ಗಾನ** ರಾಗ— ಮಾಂಡ್

ಕಾಲನಟನು ತಿರುಗಿ ಏಕೊ ಬರುತಿದಾನೆ
ಇನ್ನು ಏನೊ ಹೊಸತು ಥಳಕು ತರುತಿದಾನೆ
ಭಿನ್ನ ಭಿನ್ನ ವರ್ಣ ಬೆಡಗು ತೋರುತಾನೆ
ಯುಗವನೊಂದು ತುಳಿದುಬಿಟ್ಟು ನಲಿಯುತಾನೆ.
ಕಾಲಚಕ್ರ ನಿನಗೆ ಮಣಿವೆ
ಶರಣುಶರಣು ಶರಣು ಎಂಬೆ
ಮರಣದಾಟ ನಿನ್ನ ಮುಂದೆ

ಮಕ್ಕಳಾಟದಂತೆ ತಂದೆ

। ಕಾಲನಟನು ತಿರುಗಿ ಏಕೊ ।

[ತೆರೆಯನ್ನೊಡೆಯುವಂತೆ ಕಾಲನಟನೀಗ ಬರುತ್ತಿರುವನು. ತನ್ನ ಸೃಷ್ಟಿಯ ಚಕ್ರವನ್ನು ತಿರುಗಿಸುವ ಕುಲಾಲನಂತೆ ನಲಿದು ಸರಿಯುತ್ತಾನೆ.]

[ಕಲಿಯುಗವು ಬಂದಿದೆ. ಜಗವೆಲ್ಲ ಚಂಚಲ ಬಣ್ಣಗಳಿಂದ ಮಿರುಗುವ ಕಾಮನ ಬಿಲ್ಲಿನಂತಿದೆ. ಈ ಬಣ್ಣಕ್ಕಾಗಿ, ಸ್ವಾರ್ಥದಿಂದ ಬಾಯಿಬಿಟ್ಟು ಬಡಿದಾಡುವ ಜನರ ಸಂತೆಯು ತುಂಬಿದೆ.]

**ನೇ. ಗಾನ** ರಾಗ—ಯಮುನ್ ಕಲ್ಯಾಣಿ

ದ್ವಾಪರದ ಸಂಜೆಯೊಳು ಕೃಷ್ಣನುಲಿದಿಹ ಗೀತೆ,
ಸಂಜೆವಕ್ಕಿಗಳೊಡನೆ ಕಂಠವನು ಬಿಗಿಹಿಡಿದು
ಕತ್ತಲಿನ ಕರೆಗಾಳಿ ಒತ್ತಿ ಬೀಸುವ ಮುನ್ನ,
ಸತ್ತು ಹೋಗಿರಬೇಕು—ಸುಳಿವ ಮರೆಸಿ.

ತಮ್ಮ ಕರ್ಮದ ದಿವ್ಯ ದೀವಟಿಯ ಬೆಳಕನ್ನು
ಜೀವನಕೆ ಹೊಂದಿಸುತೆ ಹಾದಿಸಾಗುತಲಿರದೆ
ತಮ್ಮ ಹೊನ್ನಿನ ಬಲದಿ ಪರರ ಬಾಳ್ವೆಯ ಬೆಳಕ
ಹರಿಸಿ, ಕಗ್ಗತ್ತಲಲಿ ಸಾಗುತಿಹರು.

ನೋಡಲ್ಲಿ—ಕೇಳತ್ತ—ಮಾನವನ ಕಾಂಕ್ಷೆಯನು!
"ನಾನೊಬ್ಬ ಬದುಕುವೆನು; ಜಗವೆಲ್ಲ ಎನಗಾಗಿ
ದುಡಿದು ದಣಿವುದು ನ್ಯಾಯ; ಭೋಗಭಾಗ್ಯಗಳೆಲ್ಲ
ಜೀವನದ ಗಾನಕ್ಕೆ ಶ್ರುತಿಲಯಗಳು."

ತನಗಾಗಿ ಎಲ್ಲೆಲ್ಲು ಜೀವಕೋಟಿಯನುರಿಸಿ,
ತನ್ನ ಕಣ್ಣಿಗೆ ಅದುವೆ ದೀಪದುತ್ಸವವೆಂದು
ಹಿರಿ ಸೊಕ್ಕಿನಿಂ ಹಿಗ್ಗಿ, ಮೈಮರೆದು ನಿಂದಿಹರು—
ಇನ್ನಿವರ ಸುಡುಗಾಡು ಬೇರೆಯೆಲ್ಲಿ ?

ನೋಡಲ್ಲಿ.—ಸಿದ್ಧಾರ್ಥ ರಾಜಕುವರನ ಲೀಲೆ !
ಮಸಣದಲಿ ನೆಗೆಯುತಿಹ ಕಿಚ್ಚು ಕಾಣುತೆ ಬೆದರಿ,
ಕಂಬನಿಯ ಮಳೆಗರೆದು ಉರಿಗೆ ತಂಪಿಡುತಿಹನು,
ತನ್ನ ಧ್ಯಾನದ ಬಲದಿ ಜಗವನುಳಿಸೆ.

ಕರುಣೆಯೆಂಬುದು ಅವನ ತಪದ ಸಾಧನವಾಗಿ
ಬುದ್ಧತ್ವದೊಳು ಇಂದು ಚಿಗುರಿ ಫಲಿಸುತಲಿಹುದು.
ಹಿರಿಯ ಮರುಕವ ತಾಳಿ, ಜನರ ಬೇಡುತಲಿಹನು
ಅರರೆ! ಕಂದಮ್ಮಗಳೆ ದುಡುಕ ಬೇಡಿ!

ಬುದ್ಧ—

ಕಣ್ಣೆಮರು ಮಾಯಕದ ಆಟಗಾತಿಯು ಬಂದು
ಹೆಣ್ಣು ಹೊನ್ನಗಳ ಆಶೆಯನುರಾಗ ಊದುವಳು.
ಇನ್ನವಕೆ ಮಂಕಾಗಿ, ತಮ್ಮ ತಾ ಮರೆಯವರೆ!
ಇನ್ನು ಹೆಚ್ಚಿನ ಸುಖವು ಬೇಡವೇನು ?

ಬಿನ್ನಗಳ ಜವುಗು ನೆಲಈ ಹಾಳು ಸಂಸಾರ
ಚೆನ್ನ ಹಸುರಿನ ಹೊದಿಕೆ ಕಂಡು ಕಾಲಿಡಬೇಡಿ
ಕಣ್ಣುಕಟ್ಟಿನ ಬಣ್ಣ! ಕೆಸರನುಣಿಸುವ ತಿಣ್ಣ
ಅಣ್ಣದಿರೆ, ಮುಂಬರಿದು ಮುಳುಗಬೇಡಿ.

ಸಂಸಾರವೆಂಬೊಂದು ಕನಸ ಗಂಟನು ಕಂಡು
ಕೈ ಚಾಚುವವರುಂಟೆ! ಚಾಚುತಿರೆ ಸುಖವುಂಟೆ!
ತನ್ನ ಸುಖವನು ತನ್ನ ಹೃದಯದೊಳು ಕಾಣುವುದೆ
ಮಿಗಿಲಿಲ್ಲದಿಹ ಯೋಗ, ಭೋಗ, ಭಾಗ್ಯ.

[ಕಾಲತೆರೆಯು ಬುದ್ಧ ಯುಗದ ಚಿತ್ರವನ್ನು ಅಳಿಸುವಂತೆ ಮಬ್ಬು ಕವಿದು ಬಿಡುವುದು.]

೪

**ನೇ. ಗಾನ** ರಾಗ---ಪೂರ್ಗ್‌ಡ್

ಕಾಲನಿವನು ತಿರುಗಿ ನಲಿದು ಬರುತಿದಾನೆ
ಯುಗದ ಬಟ್ಟೆ ಕಳಚಿ ಬೇರೆ ಉಡುತಿದಾನೆ
ಉಬ್ಬಿ ನಿಂತು, ಹಬ್ಬಿ ಬಂದು ಸರಿಯುತಾನೆ
ಮಬ್ಬಿನಂಥ ಪರೆಯನೊಂದ ಬೀಸುತಾನೆ.

ನಿನ್ನೆ ಕಂಡ ನೆನಹೆನೆಲ್ಲ
ಕುರುಡುಗೈದು ಬಿಡುವೆಯಲ್ಲ
ನಾಳೆಯೆಂಬ ನೆನಹೆನಳಿಸಿ
ಇಂದಿನಾಟದಮಲ ಕುಡಿಸಿ
। ಕಾಲನಿವನು ತಿರುಗಿ ನಲಿದು ।

[ಕಾಲನಟನು ನಲಿಯುತ್ತ ಬರುವನು. ಕಾಲಸರ್ಪವಾಗಿ ಹೆಡೆಯಾಡಿಸಿ ಗಾನಕ್ಕೆ ಮನಸೋತಂತೆ, ಇನ್ನೊಮ್ಮೆ ಗಾರುಡಿಗನನ್ನು ಮೂದಲಿಸುವಂತೆ, ತನ್ನ ಗಾನ ತನ್ನಲ್ಲಿದೆ ಎನ್ನುವಂತೆ, ನರ್ತಿಸುತ್ತ ಬರುವನು.]

[ಕಾಲತೆರೆಯು ಸರಿಯಲು ನವದೃಶ್ಯವೊಂದು ಕಣ್ಣಿಗೆ ಬೀಳುವುದು. ಕತ್ತಲು ಕವಿದಿದೆ. ಜಗತ್ತಿನ ಗದ್ದಲವು ಅತಿಯಾಗಿದೆ.]

**ನೇ ಗಾನ** ರಾಗ---ಮಾಲಕಂಸ

ಅತ್ತ ನೋಡೆಲೊ ಅಲ್ಲಿ, ಸುತ್ತಲಿನ ಬಯಲನ್ನು
ತತ್ತರಿಪ ಮುಗ್ಗರಿಪ ಕುರುಡುಕಾಕರ ಸಂತೆ!
ಹಾಳು ಹೊಲಸಿನ ಬಾಳ್ವೆಯೊಳು ಮಿಂದು ನಗುತಿಹರು
ಕೆಸರಿನಲಿ ಮೈಮರೆತ ಕೂರ್ಮನಂತೆ.

ತಮ್ಮ ಪಾಪದ ಬೆಟ್ಟ ಮುದದಿಂದ ಮರೆಸುವರು,
ಪರರ ಪಾಪದ ಕಣವ ಬೆಟ್ಟವೆಂದೊದರುವರು!
ಬಾಳಿನಲಿ ದೈವವನು ಅರಸಲಾರದೆ ಸೋತು
ಕಲ್ಲೊಳಗೆ ಕಾಣಲಿಕೆ ಯತ್ನಿಸಿಹೆರು.

ನೋಡತ್ತ! ದಿಸೆಕವಿದ ಕಾರ್ಮುಗಿಲ ಬಿರಿಯುತ್ತೆ,
ಹೊನ್ನಬಣ್ಣದ ಜ್ಯೋತಿ ಒಡೆದು ಬರುತಿಹೆ ಚಿತ್ರ,
ತನ್ನ ಶಿಲುಬೆಯ ತಾನು ಹೊತ್ತು ತರುತಿಹ ಚಿತ್ರ,
ಮೊಳೆಯ ಮೊನೆಯಲಿ ನಿಂತ ಕ್ರಿಸ್ತ—ಚಿತ್ರ.

ತನ್ನ ಹೃದಯದ ಮಮತೆ ಜಗಕೆ ಹಂಚಲು ಹೋಗಿ
ತನ್ನವರ ಅಜ್ಞಾನ ದ್ವೇಷಗಳಿಗೀಡಾಗಿ
ಇನ್ನಿಲ್ಲದಿಹ ಕಷ್ಟ ತಾಪಗಳ ಹೊರೆ ಹೊತ್ತು
ತನ್ನ ಮೃತ್ಯುವ, ನೋಡು, ತಬ್ಬಿ ಬರುವ.

**ಯೇಸು—**

ಸಂಸಾರವೆಂಬುದಿದು ಒಂದೆ ಸಾಗರದಲೆಯು
ಸಂಸಾರಿ ತಾನವನು ಅಲೆಯ ನೀರಿನ ಹನಿಯು.
ಕಾಡುವನ ಕಡಿವವನ ಕೂಡಿ ಬೆರೆಯಲು ಬೇಕು—
ಪ್ರೇಮವೊಂದೇ ಹಿರಿಯ ಜೀವನಕೆ ಸೊಗಸು.

[ ಮತ್ತೊಂದು ಕಾಲತೆರೆಯು ಕವಿಯಿತು. ಹಿಂದಿನ ದೃಶ್ಯವು ಅಳಿಸಿತು ]

*

**ನೇ. ಗಾನ** ರಾಗ—ಮಾಂಡ್

ತಾನು ಕುಣಿದು ಜಗವ ಕುಣಿಸಿ ಬರುತಿದಾನೆ
ಒಂದೆ ತಾಳಕೆರಡು ಹೆಜ್ಜೆ ಇಡುತಿದಾನೆ
ಬೆಡಗು ಬಣ್ಣವೆರಚಿ ಬೀಸಿ ಬರುತಿದಾನೆ
ಕಣ್ಣು ಕುಕ್ಕಿ ಹೊಳೆವ ರಂಗು ತೋರುತಾನೆ.

ಕಾಲ ನಿನ್ನ ಮಾಯದೊಳಗೆ
ಮತಿಯು ಮಂಕು ಮುಕ್ಕಿ ಭ್ರಮಿಸಿ
ದಾರಿ, ಗುರಿಯನೆಲ್ಲ ಬೆರಸಿ

ಕಾರ್ಯ, ಕರ್ಮ ಕೆಡಿಸದಿಹುದೆ
। ತಾನು ಕುಣಿದು ಜಗವ ಕುಣಿಸಿ ।

[ಕಾಲಪುರುಷನು ಹೊಸತೊಂದು ಸೃಷ್ಟಿಗಾಗಿ ಬರುತ್ತಿದಾನೆ. ವಿವಿಧ ವಾದನಗಳೊಡನೆ ಆಟವಾಡಿ, ಸೃಷ್ಟಿಯ ಗಿಡವನ್ನು ಚಿಗುರಿಸಿ, ಅದನ್ನು ಮೋಹಿಸಿ, ನಕ್ಕು ನೆಗೆಯುತ್ತಾನೆ.]

[ಕವಿದ ಮುಬ್ಬು ಸರಿದು ಹೊಸತೊಂದು ಜಗವೂ, ಜನತೆಯೂ ಕಾಣಿಸುವುದು. ಬ್ರಾಹ್ಮಣ, ಬಿಕ್ಕು, ಪಾದ್ರಿ, ಮೌಲ್ವಿ—ಮೊದಲಾದ ವಿವಿಧ ಮತಾವಲಂಬಿಗಳು ಒಬ್ಬೊಬ್ಬರಾಗಿ ಬರುತ್ತಾರೆ.]

**ನೇ. ಗಾನ** ರಾಗ : ಜಿಲ್ಲಾ

ನವಯುಗವು ತಾನಿದು ನವಯುಗವು
ತೋರುವುದೇನಿದು ಹೊಸ ತೆರ ದೃಶ್ಯ
ಬರುವರು ಯಾರೀ ಹೊಸ ಪರಿಜನರು
ತೋರುವರೇತಕೆ ಠೀವಿಯ ಉಸಿರು! ॥ ಮೇಳ ॥

ಬಾಹ್ಯದ ತೊಡಿಗೆಯು ಯೋಗಿಗಳಂತೆ
ಕಾಯದ ಬಯಕೆಯು ಭೋಗಿಗಳಂತೆ
ಆಶೆಯ ಪಾಶವೆ ಹೊತ್ತಿಹ ಕಂತೆ.
॥ ಮೇಳ ॥

ಬರುವನು ನೋಡೆಲೊ ಮುದ್ರೆಯ ಧರಿಸಿ
ಕೊರಳಲಿ ಕಾಂಬುದು ಮಾಲೆಯು ತುಳಸಿ
ಹೊನ್ನಿನ ಆಸೆಗೆ ಬರುವನು ಬಳಸಿ.
॥ ಮೇಳ ॥

ಉತ್ತಮನೆಂಬುವ ತನ್ನನು ತಾನು
ಹೀನವು ಎನ್ನುವ ಉಳಿದಿಹ ಜಗವನು
ಉತ್ತಮ ಒಡವೆಯ ತಿಳಿಯನು ಇವನು.
॥ ಮೇಳ ॥

ಪಾದ್ರಿಯು ಇವನು, ಇವನಿದ್ದೊ ಬಿಕ್ಕು,
ಮುಲ್ಲನು ಮತ್ತಿವ ಎಲ್ಲ ತಾನೆನ್ನುವ,
ತಮ್ಮಯ ಮತವೇ ಸಕಲವು ಎನ್ನುವ.
|| ಮೇಳ ||

ಪಾದ್ರಿ—

ಜಿಹೋವನೊಬ್ಬನೆ ಜಗದಲಿ ನಿಜವು
ನಮ್ಮಯ ಪಂಥವೆ ಅಲ್ಲಿಗೆ ಪಥವು
ನಂಬದ ಜನರಿಗೆ ನರಕವೆ ಗತಿಯು
|| ಮೇಳ ||

ನೇ. ಗಾನ

ಬಿಕ್ಕುವು, ಮುಲ್ಲನು, ಪಾದ್ರಿ ಸನ್ಯಾಸಿಯು
ಒಂದೇ ಮಾಲೆಯ ಬಣ್ಣದ ಮಣಿಗಳು
ಧರುಮವು ಇವರಾ ಅಂಗಡಿ ಒಡವೆಯು.
|| ಮೇಳ ||

ತಮ್ಮಯ ಮತವನು ಎಲ್ಲೆಡೆ ಸಾರಲು
ರಕುತದ ಹೊಳೆಗಳ ಹರಿಸುತೆ ಬರುವರು
ಸುಳ್ಳಿನ ನೀರಿಗೆ ಮೀನಂತಿಹರು || ಮೇಳ ||
[ಕಾಲತೆರೆಯು ಇನ್ನೊಮ್ಮೆ ಬಂದು ಮೊದಲಿನಂತೆ ಬೀಳುವುದು.]

೬

ನೇ. ಗಾನ — ರಾಗ—ಮಾಂಡ್

ಝುಣರು, ಝುಣರು ಹೆಜ್ಜೆಯಿಡುತ ಬರುತಿದಾನೆ
ಕುಣಿದು ಕೆಲೆದು ಹಾರಿ ಚೀರಿ ನೆಗೆಯುತಾನೆ
ಚಪಲ ಮನಕೆ ಗಾಳಿ ಬೀಸಿ ನಗುತಿದಾನೆ
ಎಲ್ಲ ಮನವ ತಲ್ಲಣಿಸುತ ಸರಿಯುತಾನೆ.

ಕಾಲ ನಿನ್ನ ಉಸಿರ ಸುಳಿಗೆ
ಕಾಲನೂರಿ ನಿಲುವುದೆಂತು!
ತೇಲಿಸುವೆಯೆ ನೆಲೆಯನೆಲ್ಲ!
ಸೋಲಿಸುವೆಯು ಧೈರ್ಯವೆಲ್ಲ!
। ಝಣರು ಝಣರು ।

[ಕಾಲನಟನು ಪಕ್ಷಿಯಂತೆ ಹಾರಿ ತೇಲುತ್ತಾನೆ! ಗಗನದ ತುದಿಗೆ ಏರಿ ಮಿಗುವ ನೋಟಕ್ಕಾಗಿ ಹಿಗ್ಗುತಿದ್ದಾನೆ.]

[ಕಾಲ ತೆರೆಯು ಸರಿದಿದೆ. ವಿಜ್ಞಾನಯುಗವು ಕಾಲಿರಿಸಿದೆ. ಮಾನವ ಬಲದ ಮೇಲಿನ ಅತಿ ವಿಶ್ವಾಸವೂ, ಅಂಧಜೀವನದ ತಿರಸ್ಕಾರವೂ, ಪ್ರತಿಯೊಂದನ್ನೂ ಅನುಮಾನದಿಂದ ವಿಚಾರಿಸುವ ಸಂಶಯಬುದ್ಧಿಯೂ ಜಗಕ್ಕೆ ಬಂದಿದೆ.]

**ನೇ. ಗಾನ** ರಾಗ —ಶಂಕರಾ

ತನ್ನಯ ಬಲವೇ ಹಿರಿತನವೆನ್ನುವ
ತನ್ನಯ ಶೋಧನೆ, ಸೃಷ್ಟಿಯದೆನ್ನುವ
ನವಯುಗ ಬ್ರಹ್ಮನು, ವಿಜ್ಞಾನಿ ಬರುವ.

**ವಿಜ್ಞಾನಿ—**

ಧರುಮವದೆಂಬುದು ಕಳ್ಳರ ನೆಲೆಯು
ಮೂಢ ಪ್ರಪಂಚಕೆ ಮಾಯದ ಬಲೆಯು
ಮನದ ಪ್ರವಾಹಕೆ ಹೇಸಿನ ತಡೆಯು.

ಇಲ್ಲದ ದೇವಗೆ ಮಡಿಯುತೆ ದಣಿಯುವ
ಯೋಗಿಗಳೆಲ್ಲರ ಮೌಢ್ಯಕೆ ಮರುಗುವೆ.
ವೇಳೆಯ ಬೆಲೆಯನು ಅರಿಯರು ದಿಟವು.

ದೇವರ ಬಯಸುವ ಜನರ ಪ್ರಯತ್ನವು
ಕತ್ತಲು ಮನೆಯಲಿ ಇಲ್ಲದ ಒಡವೆಯ
ಹುಡುಕುವ ಕುರುಡರ ಸಾಹಸ, ನಿಜವು.

[ಕಾಲದ ಹೊಸ ತೆರೆಯು ಈ ಯುಗವನ್ನೂ ಅಳಿಸುವುದು. ಭಾವೀ ಯುಗದ ಸನ್ನಾಹ ನಡೆದಿದೆ.]

೭

**ನೇ. ಗಾನ** ರಾಗ--ಮಾಂಡ್

ಅಲ್ಲಿ ನೋಡು, ತಿರುಗಿ ನೋಡು, ನಾಟ್ಯವನ್ನು
ಮುಂದೆಬರುವ ಯುಗದ, ಜಗದ, ನೋಟವನ್ನು
ಕಾಲ ದಾತ ನಲವಿನಿಂದ ಬರುವನಲ್ಲ
ತಾನೆ ಇಂಥ ಹೊಸತು ಹಬ್ಬ ತರುವನಲ್ಲ

ಕಾಲದಾತನವನ ಕುಣಿತ
ಮೇಲು ಸಾಟಿಯಿಲ್ಲದಂಥ
ಲೀಲೆ, ಜಾಲ, ಏರು, ಇಳಿತ
ಕೂಡಿ ಹರಿದು ನೆಗೆವ ಕುಣಿತ
। ಅಲ್ಲಿ ನೋಡು, ತಿರುಗಿ ನೋಡು ।

[ಕಾಲನಟನು ಈ ತನಕ ಕಟ್ಟಿದ ಕನಸನ್ನು ಸುಟ್ಟು, ತಾಂಡವವಾಡಿ, ನವಸೃಷ್ಟಿಯ ಸೊಗಸನ್ನು ಸಾರಿ ತೆರಳುವನು.]

[ಕಾಲ ತೆರೆಯು ಸರಿದಿದೆ; ಅತ್ಯಂತ ಸುಂದರ ಸೃಷ್ಟಿಯೊಂದು ಬಂದಿದೆ! ಬಣ್ಣ, ಬೆಡಗು ವೈವಿಧ್ಯಗಳು ಎಣಿಕೆಯಿಲ್ಲದಷ್ಟಿವೆ; ಆದರೂ ಭೇದವಿಕಾರಗಳಿಗೆ ಅವಕಾಶವಿಲ್ಲ.]

**ನೇ. ಗಾನ** ರಾಗ--ಮೋಹಿನಿ

ಏಳೇಳು ಬಣ್ಣಗಳು ಹನಿಗೂಡಿ ಒಂದಾಗಿ
ಹೊಳೆಯಾಗಿ ಶಾಂತಿಯಲಿ ಹರಿಯುತಿಹವು
ತಡಸಲಿನ ಅಬ್ಬರದಿ ಧುಮುಕುತಿಹವು
ಮುಗಿಲಿಗಿಹ ಲಘುತೆಯಲಿ ತೇಲುತಿಹವು!

ಸಪ್ತ ಸ್ವರಗಳು ಸೇರಿ ನೂರಾರು ಮೇಳದಲಿ
ರಾಗಗಳು ತೆರಗೊಂಡು ಉಕ್ಕುತಿಹವು.
ಭಾವಗಳು ಬಯಲಾಗಿ ಹರಡುತ್ತಿಹವು;
ಆನಂದ ನೊರೆಯಾಗಿ ನಗುತಲಿಹುದು.

ಎಷ್ಟೆಲ್ಲ ರೇಖೆಗಳು ಸೃಷ್ಟಿಗಿಹ ಉಕ್ಕಿನಲಿ
ಚುಕ್ಕಿಗಳನೊಮ್ಮೊಮ್ಮೆ ಕಟ್ಟುತಿಹವು
ಚಿತ್ರ ಪ್ರತಿಚಿತ್ರಗಳ ಬರೆಯುತಿಹವು
ಬಳ್ಳಿಗಳ ಪರೆಗಳನು ನೇಯುತಿಹವು.

ದನಿ, ವರ್ಣ, ರೇಖೆಗಳು ಕುಣಿಯುತಿವೆ ಮಿಗುವಂತೆ
ಯಾರದೊ ಬೆಡಗಿನಲಿ ಮೋಹಗೊಂಡು
ಏನೇನೊ ಭ್ರಮೆಯೊಳಗೆ ಬಲಿದುಕೊಂಡು
ಯಾರಲ್ಲೊ ಬೆರೆಯಲಿಕೆ ಬಯಕೆಗೊಂಡು.

ಭಾವಗಳು, ಬಿಂಬಗಳು, ದಿವ್ಯಾತ್ಮ ಜ್ಯೋತಿಗಳು
ನೋಡಲ್ಲಿ! ಮುದದಿಂದ ಮಿನುಗುತಿಹವು!
ನಗುನಗುತೆ ಕೆಳೆಯಲ್ಲಿ ಬೆರೆಯುತಿಹವು
ಸಾಮಗಾನದಿ ಸಿಂದು ತೂಗುತಿಹವು.

ಬೆಳಕುಗಳ ಸಂತೆಯಿದು. ಕತ್ತಲಿಗೆ ಎಡೆಯೆತ್ತ ?
ಅಲ್ಲಿಹನು ಶ್ರೀಕೃಷ್ಣ—ಯೇಸುವೊಡನೆ.
ಅಲ್ಲಿಹನು ಗೌತಮನು ಅಲ್ಲನಲ್ಲೇ,
ಜರತುಷ್ಟ್ರ, ಋಷಿವರರು—ಎಲ್ಲರಿಹರು.

ಈ ಗಾನ ರಚನೆಯಲಿ ಬೆರೆಯಲಿಕೆ ಬಾರದಿಹ
ಇನ್ನೇನೊ ಕೆಡುದನಿಯು, ಬರುತಲಿಹುದು

ಯಾರೆನಲಿ ಅವರನ್ನು! ಇಳೆಯ ಜನರು
ಸ್ವರ್ಗವನು ಕಾಣಲಿಕೆ ಬರುತಲಿಹೆರು.

ಪಾದ್ರಿಯುವ, ಬಿಕ್ಕುವಿವ ಎಲ್ಲರಿಲ್ಲಿಗೆ ಬಂದು,
ಎದೆಯಳುಕಿ ನಡುಗುತಲಿ ನಿಂದರಲ್ಲ.
ಕಣ್ಣುಗಳು ಶಿಲೆಯಾಗಿ ಚಲಿಸವಲ್ಲ
ಥರಥರಿಪ ತುಟಿಗಳೊಳು ಸೊಲ್ಲೆ ಇಲ್ಲ!

ಬಿಕ್ಕು—

ನಮ್ಮ ಇಳೆಯೊಳು ಉದಿಸಿ, ನಮ್ಮ ಪೂಜೆಯ ಹೊಂದಿ
ದೇವರೆಂದೆನ್ನುತಲಿ ವಂಚಿಸಿವರು
ಜಗಳಕೆಮ್ಮನು ಬಿಟ್ಟು ಸುಖಿಗಳಿವರು
ತಾವೆಲ್ಲರೊಂದಾಗಿ ನೋಡುತಿಹೆರು.

ಪಾದ್ರಿ—

"ಯೇಸು ಎಂಬವ ನೀನೆ! ಘಾಸಿಗೈಯುತೆ ಬಂದೆ
ನಿನಗಾಗಿ ಹಲಜನರ ಕೊಲಿಸಿ ಬಂದೆ
ನಿನಗಾಗಿ ಪರಮತದ ದ್ವೇಷ ಗೈದೆ
ನೆರೆಯುವನ ಕಂಡರೂ ಭೇದ ಗೈದೆ.

ವಿಪ್ರ—

ಮಾಧವನೆ ನಿನಗಿಂದು ಮ್ಲೇಂಛರಲಿ ಗೆಳೆತನವೆ!
ನಿನ್ನ ಗೀತೆಯ ನುಡಿಯ ನಡೆಸಿ ಬಂದೆ.
ವ್ಯಾಕರಣ ತಲೆಕೆಳಗು ಗೈದು ನಿಂದೆ.
ಜ್ಞಾನ ಕರ್ಮದ ಹಿಸುಕು ಹೆರಿದು ಬಂದೆ.

**ನೇ. ಗಾನ.**

ಅಲ್ಲಗಾಗಿಯೆ ಮೌಲ್ವಿ, ಬುದ್ಧಗಾಗಿಯೆ ಬಿಕ್ಕು
ಎಲ್ಲರೂ ಬಿಕ್ಕಿ ಬಿರಿ ಅಳುತಲಿಹರು,
ವಂಚನೆಯ ನೆನೆನೆನೆದು ಸಿಡಿಯುತಿಹರು,
ಕಣ್ಣೆದಿರ ದೃಶ್ಯವನು ಚುಚ್ಚುತಿಹರು.

[ಅವರ ದುಃಸ್ಥಿತಿಯನ್ನು ಕಂಡು ಯಾಜ್ಞ್ಯವಲ್ಕ್ಯನು ಅವರನ್ನು ಸಮಾಧಾನ ಪಡಿಸಲು ಮುಂದೆ ಬಂದು ಕೈನೀಡುವನು.]

**ಯಾಜ್ಞ್ಯ**

ಏಕಿಂಥ ಕಿಡಿ ಉಸಿರ ಕಾರುವಿರಿ ಬಂಧುಗಳೆ ?
ನಮ್ಮ ನೆಲದೊಳು ಕಾಲನಿರಿಸಿ ನೋಡಿ.
ಇಲ್ಲಿರುವ ಬಾಗಿಲನು ದಾಟಿ ನೋಡಿ,
ಹೃದಯದೊಳಗಿನ ಹೆಮ್ಮೆ ಹರಿದು ನೋಡಿ.

[ಅವನ ಆದರದ ಹಸ್ತವನ್ನು ಹಿಡಿದು ಮುಂದೆ ಸರಿಯುಲು ಎಲ್ಲರೂ ಅಂಜುವರು. ಎಲ್ಲರೊಡನೆ ಬಂದ ವಿಜ್ಞಾನಿಯು, ಧೈರ್ಯದಿಂದ ಅವನ ಕೈಗಳನ್ನು ಹಿಡಿದು ಮುಂದೆ ನಡೆದು ಮುಕ್ತದ್ವಾರದ ಆಚೆ ನೋಡುವನು.]

**ನೇ. ಗಾನ.**

ನೋಡಲೇನಿಹುದಲ್ಲಿ ಮುಕ್ತದ್ವಾರದ ಆಚೆ!
ಆನಂದದನುಭವವು ಸೂಸುತಿಹುದು.
ಮಾತೊಂದು ಮೌನದಲಿ ಚಲಿಸದಿಹುದು
ಪ್ರೇಮಭಾಷ್ಪವು ಉಕ್ಕಿ ಹರಿಯುತಿಹುದು

ತಡೆಯಲಾರದ ಶಕ್ತಿ! ಎಲ್ಲರನು ಸೆಳೆದಿಹುದು!
ವಿಜ್ಞಾನಿ ಹೆಜ್ಜೆಯಲಿ ನಡೆದರೆಲ್ಲ.
ಅವನಂತೆ ಕಲ್ಲಾಗಿ ನಿಂದರಲ್ಲ!
ಭೇದ ಭಾವದ ಗೆರೆಯು ಅಳಿಸಿತಲ್ಲ!

ಕೃಷ್ಣ—

ನಿಸ್ವಾರ್ಥ, ನಿಷ್ಕಾಮ, ನಿಸ್ಸೀಮ ಭಾವದೊಳು:

ಯೇಸು—

ದ್ವೇಷವೆಲ್ಲವ ಹೆರಿದು ಚೆಲ್ಲಿರೆಲ್ಲ.

ಬುದ್ಧ—

ಪ್ರೇಮ ತಾಳದ ದನಿಗೆ ಕುಣಿಯಿರೆಲ್ಲ.

ಜರತುಷ್ಟ—

ಸೌಂದರ್ಯ ಸೋದರತೆ ಕಾಣಿರೆಲ್ಲ.

ಯಾಜ್ಞ್ಯ—

ಗಿಡ, ಮರವು, ಶಿಲೆ, ಸಾವು, ನರನಾರಿ—ಹೊ, ಹಾವು

ಬ್ರಾಹ್ಮಣ—

ಒಂದೆ ರಾಗದ ಭಿನ್ನ ಆಲಾಪವು.

ಪಾದ್ರಿ—

ಒಂದೆ ತೇಜದ ಭಿನ್ನ ಕಿಡಿಕೂಟವು.

ಬಿಕ್ಕು—

ಒಂದೆ ಹೃದಯದ ಹೆಸುರು, ಹಾರಾಟವು.

[ತಿರುಗಿ ಕಾಲತೆರೆಯು ಬೀಳುವುದು.]

**ನೇ. ಗಾನ**

ರಾಗ—ಮಾಂಡ್

ಕಾಲದೇವ ಇನ್ನು ತಿರುಗಿ ಬರುತಿದಾನೆ
ಏನೋ ಕನಸನೊಂದು ಹೆಣೆದು ಬೆಳಸುತಾನೆ
ಹೊಸತು ರಾಜ್ಯ, ಹೊಸತು ಸೃಷ್ಟಿ ತರುತಿದಾನೆ
ಮನದ ಎಟಕು ಮೀರಿ ನೆಗೆದು ಬರುತಿದಾನೆ

ಕಾಲ ನಟನೆ ನಿನ್ನ ಲೀಲೆ
ನಿನ್ನ ಕನಸು—ಘೋರವಿಹುದು.
ಹುಟ್ಟು ಸಾವು ಸೃಷ್ಟಿ ಲಯವು
ನಿನ್ನ ಉಸಿರು ನಿನ್ನ ನಿಮಿರು

ನಮ್ಮ ಎದೆಯ ಅಳತೆ ಮೀರಿ
ಹರಿವ ನಿನ್ನ ರಾಗಲಹರಿ
ನಿನ್ನ ಬೆರತು ಕೂಡದಿರಲು
ಎಮ್ಮ ಮನಕೆ—ಸಿಗುವದೆಂತು!

। ಕಾಲದೇವ ಇನ್ನು ತಿರುಗಿ ।

[ಕಾಲನು ಪುನಃ ಕುಣಿತಕ್ಕೆ ಅಣಿಯಾಗಿದ್ದಾನೆ! ಇಷ್ಟೆಲ್ಲ ಚಿತ್ರಗಳನು ಬರೆದು ಅಳಿಸಿಯಾಯಿತು! ಇನ್ನು ಬರೆವುದು—ಏನೋ! ಯಾರು ಬಲ್ಲರು? ಇಲ್ಲೊಂದು ಕೊನೆಯಾಯಿತೆಂಬುದಿದೆಯೆ? ಇದೇ ತಿಳಿವಿನ ಬುಡವಿರಬಹುದು.]



[ಈ ನಾಟಕದಲ್ಲಿ ರೈತ ಜನರ ಗುಂಪು ನಡುವೆ ನಲಿದಾಡುವ ಪಾತ್ರ ವರ್ಗವಾದರೆ, ಅವರಿಗೆ ಪೋಷಕರು, ಸ್ಪರ್ಧಿಗಳು, ವೈರಿಗಳು ಆಗಿ— ಋತುಗಳು ನಲಿದಾಡುತ್ತವೆ. ಇಲ್ಲಿ ನಿಸರ್ಗ ಸಂಕೇತವಾಗಿ ಪಾತ್ರ ವಹಿಸುತ್ತದೆ. ನಿಸರ್ಗ ಸೂಚಕ ಉಡುಗೆಯಿಂದ ನಟರು ಬರೋಣ.]

**ಕಥಾನಕ**—ಹಾಡು ನೃತ್ಯಗಳ ಮೇಳದಿಂದ ಸಾಗುವುದು.

ಕಥಾನಕದ ಹಲವು ಧಾಟಿಗಳು ಜಾನಪದ ರೀತಿಯವು.



(ನೀರಿಗಾಗಿ ಮೊರೆಯಿಡುವ ರೈತರು)

**ಜನರು:** ಬಾರೊ ಬಾರೊ, ಒಲವನು ತೋರೋ
ಮುಗಿಲನು ತಾರೋ
ಹಸಿಯನು ಕಾರೋ ॥ ಬಾರೊ ॥

ಹಸುರಾಯಿತು ಕಾಣದ ಹೆಸರು ।
ಎದೆ ಮಿಡುಕಿತು ಬಿಸಿ ಬಿಸಿ ಉಸಿರು ।

ಬಾಯಾರಿತು ನದಿಗಳ ತಳವು ।
ಪ್ಮ್ರ ಬಿರಿಯಿತು ನಾಡಿನ ಹೊಲವು ।

ನಲಿ ಅಡಗಿತು ಹಕ್ಕಿಯ ಕೊರಳಿಂ ।
ಧನಿ ಉಡುಗಿತು ಪಶುವಿನ ಒಡಲಿಂ ॥ ಬಾರೋ । ಬಾರೋ ॥

(ಬೆಳ್ಮುಗಿಲುಗಳು ತೇಲಿ ಬರುವುವು)

**ಗ್ರೀಷ್ಮ:** ಕರೆದಿರೊ ಏನೊ । ನಮ್ರ ನಮ್ರ । ಕರೆದಿರೊ ಏನೊ ।
ಕಾಲವು ಬಂದಿದೆ ಬಾರದೆ ಏನು?
ನಿಮ್ಮೀ ಬಯಕೆಗೆ ಆತುರವೇನು ?

ಬಯಕೆಯೆ ರೆಕ್ಕೆಯ ತೊಟ್ಟಿಹ ಮೇಲೆ ।
ನೀಲಿಮ ನಭಕ ನಾವ್ ಉಯ್ಯಾಲೆ ।
ಮಧುವಿನ ಬಸಿರಿಗೆ ಹೂವಿನ ಜೊಲ್ಲೆ ।
ಕರೆದಿರೋ ಏನೊ ॥ ನಮ್ರ ನಮ್ರ ॥

(ಬಿಸಿಲು ಕೆಗಳಿಂದ ಬೇಗುದಿಗೊಂಡ ರೈತರು.)

**ಜನರು:** ಬಾರಾ ಬಾರಾ ಒಲವನು ತೋರೊ
ಮುಗಿಲನು ತಾರೊ । ಕಾರ್ ಮುಗಿಲನು ತಾರೋ ॥
ನೀಲಿಮ ಬಾನಲಿ ನಗುತಿಹ ನೊರೆಯೆ
ನಿನ್ನಯ ನಗುವಿಗೆ ಭೂಮಿಯೊಳ್ ಉರಿಯೆ!
ಬೆಂಕಿಯ ನಾಲಗೆ ನೋಟಕೆ ಅಂದ
ಆದರದೆಂದಿಗು ಬಯಸದ ಚಂದ ॥
ಕರಿ ಅಂಚನು ನೀ ಧರಿಸುತೆ ಬಾರಾ ।
ಕುಡಿ ಮಿಂಚನು ನೀ ನಗುತಲಿ ತಾರಾ ॥

**ಗ್ರೀಷ್ಮ:** ಮರುಳೇ ಮರುಳೇ ಮರುಳೇ........
ನಮ್ಮಯ ನಗುವಿಗೆ ನಿಮ್ಮಯ ಕೆರಳೇ
ಚೆಲುವಿನ ಬೀತನ ಬೇಡದ ನಿಮಗೆ
ಸಲಿಪೆವು ತಮ್ಮನ ಕರಿಮೊಯ ಜವದೆ ||
ಕುಡಿಮಿಂಚಿನ ಬರೆಸಿಡಿಲಿನ ನಗುವಿಗೆ
ನಿಮ್ಮಡಿ—ಈ ನುಡಿ ನಡುಗದೆ ಇಹುದೇ ?

(ಗ್ರೀಷ್ಮವು ತೊಲಗಿ ಕಾರ್ಮುಗಿಲುಗಳು ಕವಿಯುವುವು.)

**ವರ್ಷ:** ನಾವು ಬರುವೆವು, ನಾವ್ ಬಂದೆವು
ಕಾರ್ಮುಗಿಲುಗಳು ಭೀಕರ |
ನಾವ್ ಕರೆವೆವು, ನಾವ್ ಸುರಿವೆವು
ಜಡಿಮಳೆಯನು ತಾ ಭೀಕರ.
ನಾವ್ ಬಡಿವೆವು, ನಾವ್ ಜಡಿವೆವು —
ಬರೆಸಿಡಿಲನು ತಾ ಭೀಕರ ||

**ಜನ:** ಗುಡುಗೇ, ಗುಡುಗೇ, ಗುಡುಗೇ
ಬರೆ ಸಿಡಿಲೇ, ಸಿಡಿಲೇ, ಸಿಡಿಲೇ
ಬಾನ್ಗುಡಿಗಳ ಕೂಡಿಪ ಕುಡಿ ಮಿಂಚಲ್ಲಿದು
ಬಾನ್ ಗುಡಿಯನೆ ಧಗಿಸುವ ದಳ್ಳುರಿ ಇದು ಇದು ||
ಅತಿ ಬೇಡಿಕೆಯಾಯ್ತೆ ! ನಮ್ಮದು ಅತಿ ಮಾಡಿಕೆಯಾಯ್ತೆ !
ಸುಟ್ಟಿತು ಗಿಡಮರ ! ನಡುಗಿತು ಗಿರಿಗಹ್ವರ
ಹೆಮ್ಮೆಯ ಈ ಶಿರ, ನಡುಗಿತು ಥರಥರ
ಅತಿ ಬೇಡಿಕೆಯಾಯ್ತೆ ನಮ್ಮದು ಅತಿ ಮಾಡಿಕೆಯಾಯ್ತೆ |

(ಮುಗಿಲು ಸರಿದು ಮಳೆಯ ಜೋರು ಕಡಮೆಯಾಗುವುದು.)

**ಜನರು:** ಹೊಳವಾಗುತಲಿದೆ ಗೆಳೆಯ
ಹೊಳೆ ಹರಿಯುತಲಿದೆ ಗೆಳೆಯ |
ಮಳೆ ಮುದ್ದಿಸುತಿದೆ ಇಳೆಯ ||

ಹಸುರೇಳುತಲಿದೆ—ಇದೊ, ನೆಲವೆಲ್ಲ
ನದಿ ಉಕ್ಕುತಲಿದೆ ಇದೊ, ಸೊಗವಲ್ಲ
ನಿಜಗೈಮೆಗೆ ಇದು ಸಮಯ
ಬಾಳ್ ನೈಮೆಗೆ ಇದೆ ಸಮಯ ||
ಬಾ ಉಳುವಾ—ಬಾ ನಡುವ.
ಮೇಲಿಂದ ಉದುರಲು ಮುತ್ತು
ಈಹಸಿರಗೆಯನೆ ಕಿತ್ತು
ನೈಮನ ಲಾಸ್ಯಕೆ ಎತ್ತು —
ಮೋದದಿ ಈಚೆಗೆ ಬಿತ್ತು |

**ವರ್ಷ:** ತುರು ತುರು ತುಂತುರು ಹನಿಸಿ
ಈ ಹಸುರಿನ ರಾಜ್ಯದಿ ನಲಿವ
ಹೊಡೆ ತುಂಬಲಿ ಗಿಡಗಳ ಜೀವಗಳಲ್ಲಿ,
ರಸ ಉಕ್ಕಲಿ ಬಾಳ್ವೆಯ ಸವಿಗನಸಲ್ಲಿ || ತುರು ತುರು ||

**ಜನರು:** ನೋಡಿರಿ ಅಕ್ಕಾ ! ನೋಡೆಲೋ ಅಣ್ಣ
ರೈತನ ಗೈಮೆಯ ಸತ್ಯವು ಪುಣ್ಯ
ಕಾಣುತೆ ಕಾಣುತೆ ರೈತನ ಬೆವರು
ನನ್ನಿಯಿಂದಾಯಿತು ಹೊನ್ನಿನ ಬಸಿರು |
ಸೋನೆಯ ಮಳೆಯನು ಮೀರಿದ ಸತ್ಯ
ನಮ್ಮಯ ದುಡಿಮೆಯು, ನೈಮೆಯ ಕೃತ್ಯ |
ಬಾರಾ | ಬಾರಾ |
ಕುಡುಗೋಲನು ತಾರಾ ||

(ಹಿಂಗಾರು ಮಳೆಯು ಬೀಸುವುದು.)

**ಶರದ್:** ಕೊಟ್ಟವರನು ತಾನ್ ಮರೆಯುವೆಯಲ್ಲಾ
ಕಟ್ಟುವನೆ ತಾನ್ ಎಂಬುವೆಯಲ್ಲ
ಕೊಟ್ಟುದು ಕರಕೇ ಸಿಗದಿರುವಂತೆ

ಕುಟ್ಟುತ ಈಗಲೆ ಗಜರುವೆನಂತೆ ।
ಗುಡು ಗುಡು ಗುಡು ಗುಡು ಗುಡಿಸಿ । ಗುಡು ಗುಡು
ಗುಡು ಗುಡು ಗುಡಿಸಿ ॥

(ಮಳೆಯು ಆರ್ಭಟಿಕ್ಕೆ ರೈತರು ಬೆದರುವರು.)

**ಜನರು:** ನೀ ಬಾರದಿರು, ನೀ ಬಡಿಯದಿರು; ನೀ ತಡೆಯದಿರು
ನೀಡಿದ ತುತ್ತನು ಕಸಿಯದಿರು
ಹುಚ್ಚಿನ ಮಾತಿಗೆ ಕೆರಳದಿರು
ನಚ್ಚಿನ ಪೂಜೆಯ ಸಲಿಸುವೆವು ॥
ಸಿಡಿ ಮಿಂಚಡಗಿತು, ಕಾರ್ಮುಗಿಲೋಡಿತು,
ಹೂ ಬಿಸಿಲೆರಚಿತು । ಬಾರಾ ಬಾರಾ
ತೆನೆ ಕೊಯ್ಯುವ ಬಾರಾ ॥
ಮನೆಗೊಯ್ಯುವ ಬಾರಾ । ತಿರಿಕಟ್ಟುವ ಬಾರಾ ।
ಬಾನ್ ದೇವರ ಕೊಂಡಾಡುವ ಬಾರಾ ।

(ಜನ ದೀಪಾವಳಿಯ ಉತ್ಸವಕ್ಕೆ ಸಿದ್ಧರಾಗುವರು.)

**ಜನ:** ಬಿತ್ತಿದ ಕಾಳು, ನೂರಾದಂತೆ
ಬತ್ತಿದ ತೊರೆಯು, ನೀರ್ನಕ್ಕಂತೆ
ಹೊತ್ತಿಸಿ ಹಣತೆಯ ಸಾವಿರವಾಗಿಸಿ ।
ಬಾನಿನ ತಾರೆಗಳ್ ಇಳಿದಂತಾಗಿಸಿ
ಮಳೆಯನು ನೀಡಿದ ಇಂದ್ರನು ಬರಲಿ
ದಿಕ್ಕುಗಳೆಲ್ಲಕೆ ಸಲ್ಲಲಿ—ಈ ಬಲಿ
ಈ ದೀಪದ ಮಿಣಿ ಮಿಣಿ —ಕಾಣುತ ಅಮರರು
ನಾಟ್ಯದ ಧಿಂ ತಿಣಿ ಗೈಯುತ ಬರಲಿ ॥

(ಚಳಿಗಾಳಿ, ಹಿಮ ಕವಿಯುವುದು.)

**ಹೇಮಂತ:** ಓ ಓ ……………ಬನ್ನಿ
ಈ ಜನತೆಗೆ ಮರುಳೇನೆನ್ನಿ ।

ಬಾಂದಾರೆಗಳನ್ನಿವರು । ನಾಚಿಸೀ ಹೊರಟಿಹರು
ತಪ್ಪಾಟಕೆ ತಾವ್ ಇವರು । ಬಲು ಬಲು ಮೈಮರೆತಿಹರು ॥
ಓ ಓ ...................ಬನ್ನಿ.
ಚಳಿಗಾಳಿಯು ಬೀಸುವ ಬನ್ನಿ ।
ಇಳಿ ಮೋಡವ ಹಾಸುವ ಬನ್ನಿ ।
ತೆಳುಪರದೆಯು ಹೊದೆಸುವ ತನ್ನಿ ।
ಭ್ರಮೆ ಆಟಕೆ ಆಗಲಿ ಸೊನ್ನಿ ॥
ಓ ಓ ...................ಬನ್ನಿ ॥

**ಜನರು:** ಬಾ ಗೆಳತಿ — ಬಾ ಗೆಳೆಯ, ಹಿಮ ಉದುರುತಿದೆ ।
ಬಾ ಗೆಳತಿ — ಬಾ ಗೆಳೆಯ, ಎಲೆ ತುಟುಕುತಿದೆ
ದೀಪದ ನಾಟ್ಯಕೆ ಮಂಜೇ ಮುಸುಕಿದೆ
ಮೈಮನವೆಲ್ಲವು 'ಕುಟು ಕುಟು'ಅನುತಿದೆ
ಹೇಮಂತ ರಾಯಗೆ ಬಂದಿದೆ ಕೋಪ,
ಚಳಿಯನು ಸುರಿಸುತೆ ಕೊಡುತಿಹ ತಾಪ ।

**ಜನರು:** ಬಾ ಗೆಳತಿ — ಬಾ ಗೆಳೆಯ—
ನೆಲದೊಳಗಿಹ ತಂಪಡುಗುವ ಮೊದಲೇ
ಊರೊಳಗಿನ ತೊರೆ ಹಿಂಗುವ ಮೊದಲೇ
ತರುಗಳು ಎಲೆಗಳ ಕಳಚುವ ಮೊದಲೇ
ದುಡಿಮೆಯ ಸಲಿಸುವ, ದುಡಿಮೆಯ ಬಾ....
ಮಾಗಿಯ ಚಳಿಗಾಳಿ ಬಡಿಯುವ ಮುನ್ನವೆ....
ಮುಗಿಸಲು ಬೇಹುದು ಎಲ್ಲಾ ದುಡಿಮೆ....
ಬಾ ಗೆಳತಿ — ಬಾ ಗೆಳೆಯಾ ।

ಹರಿಯುವ ತೊರೆಗಳ ಓಟವ ತಡೆದು
ತುಂಬಿದ ನೀರನು ಬೊಗಸೆಲಿ ಮೊಗೆದು
ಕರಿ ನೆಲವನು ತಾ ಪ್ರೀತಿಲಿ ಬಗೆದು

ಬಾ—ಉಳುವಾ । ಬಾ—ನಡುವಾ,
ಬಾ—ಉಳುವಾ । ಬಾ—ನಡುವಾ, ||

**ಹೇಮಂತ: ಶಿಶಿರರು** ಮಾಗಿ ರಾಯಾ ಸಾಗಿ ಬಾರೋ
ಬೀಸುವ ಗಾಳಿಯ ಬೇಗನೆ ತಾರೋ ||
ಬಾ.... ಬಾ.... ಬಾ...
ಹೊದೆಸುತೆ ತೆರೆವ ಹಿಮಗಳ ತೆರೆಯು
ಬೆಳೆಸುತೆ ಹರಸುವ ಬತ್ತದ ಬೆಳೆಯ ||
ಬಾ.... ಬಾ.... ಬಾ ..

(ಸುಗ್ಗಿ ಹಬ್ಬಕ್ಕೆ ಉತ್ಸಾಹಿತರಾಗುವ ರೈತರು.)

**ಜನರು:** ಹಿಗ್ಗಿ ಹಿಗ್ಗಿ ಜಗವೆಲ್ಲಾ । ಬಗ್ಗಿ ಕೊಯ್ವುದು ಪೈರೆಲ್ಲಾ
ಸುಗ್ಗಿ ಹುಣ್ಣಿಮೆ ಬಂತಲ್ಲ—ಹಿಗ್ಗಿನ ಕಟ್ಟೇ ಬಿರಿತಲ್ಲಾ—
ತಿತ್ತಿರಿ ತುಂಬಿದೆ ಬತ್ತದ ಕಣಜ ।
ತುತ್ತಿನ ಚಿಂತೆಯು ಮುಗಿದಿದೆ ಮನುಜ
ಮುತ್ತಿನ ನಗುವನು ಮಿಗುವಂತೆ ಸೂಸಿ ||
ಬೆಳದಿಂಗಳಲಿ ಕೋಲಾಟ ।
ನದಿ ದಂಡೆಯಲಿ ಸವಿಯೂಟ ।

**ಶಿಶಿರ:** ನದಿಯೂಟದ ಸೊಕ್ಕೇರುವ ಮೊದಲೇ
ಹದಗೈಯ್ಯಲು ಬೇಕಿವರ
ನಲಿಮೆಯ ಮೇರೆಯು ಮೀರುವ ಮೊದಲೇ
ಛಳಿಸಲು ಬೇಕಿವರಾ...............
ಬಾ ಶಿಶಿರಾ—ಬಾ ಹೆಗುರಾ

**ಜನರು:** ಅಮಮ ಚಳಿಯು ತಡೆಯದಿಹುದು
ಹಿಮವು ತುಂಬ ಕಾಣುತಿಹುದು

ಎಳೆವರ್ ಹೆಳೆವರ್ ಒಂದೆ ಬಗೆಯು
ಉಕ್ಕಿ ಆಯ್ತು ಸುಕ್ಕು ನೆರಿಯು
ಹೆಸುರು ಜಗವು ಹೊನ್ನು ಆಯ್ತು
ಹೊನ್ನು ಎನಲು ಕಳಚಿ ಬಿತ್ತು
ಆವರೇನು ಜೀವದೊಳಗೆ ಬಿಗುಪು ಒಂದು ಮೂಡಿ ಬಂತು
ನಮ್ಮ ಗೆಲ್ದ ಕಾಮನವಗೆ ಸೋಲು ಗಳಿಗೆ ಕೂಡಿ ಬಂತು—
ಕಾಮನನ್ನು ಹಳಿಯುವಾ ।
ಹೋಮ ಗೈದು ಮುಗಿಸುವಾ !

(ಕಾಮದಹನ ಮಾಡಿ ಹಿಗ್ಗುವರು ಜನ.)

(ರಾಗ: ವಸಂತ)

**ವಸಂತ:** ನಸು ಗಾಳಿಯ ಬೀಸುತೆ ಬರುವ
ಹುಸಿಯ ಆಟಕೆ ಕೊನೆಯನು ತರುವ ।
ತಾವ್ ಕಾಮನ ಗೆದ್ದವರಂತೆ ।
ತಾವ್ ಸಿಯುಮವ ಕಟ್ಟಿದರಂತೆ!
ನಾವ್ ಬೀಸಲು ಮಾಯೆಯ ಜಾಲ—
ಆಗುವುದೆಲ್ಲವು ಬರಿ ಬಯಲು

(ವಸಂತದ ಸುಳಿವಿಗೆ ಉನ್ಮತ್ತರಾಗುವ ಜನರು)

**ಜನರ:** ಮಂದ ಮಾರುತ
ಚಂದ ನಗುತ
ಅಂದ ಸೂಸುತ
ನಲವಿಂದ ಬಂದನು—ತೂಗುತ, ಬಾಗುತ, ಸಾಗುತ

ಬಾಂದಳವ ಕಡು ನೀಲಿಸಿ
ರೆಂಬೆಗಳ ತೆರೆ ತೂಗಿಸಿ
ಕೆಂದಳಿರನು ನಡು ಮೂಡಿಸಿ
ನಭ ಸರಸಿಗೆ ನೈದಿಲೆ—ಯಾಗಿಸಿ, ಲಾಗಿಸಿ, ಬಾಗಿಸೀ

ಅಲರುಗಳನು ಚೆಲು ಅರಳಿಸುತೆ
ಅಲರುಣಿಗಳ ಬಲು ಮರುಳಿಸುತೆ
ಒಲುಮೆಯ ತಂಪನು ಎರಚಿಸುತೆ
ಯೌವನಲಾಸ್ಯವ ಸೋಗಿಸಿ, ಮಾಗಿಸಿ, ರೇಗಿಸಿ!

ಗುಂಗುರು ಕೂದಲ ಕುಣಿತ
ಕಾಲಲಿ ಗೆಜ್ಜೆಯ ಜಣಿತ
ಕಿವಿಯೊಳು ಹೂವಿನ ಜೊಲ್ಲೆ
ಬದುಕೇ ಮಲ್ಲಿಗೆ ಮೊಲ್ಲೆ!
ಗೆಳತಿಯೆ ಕೇಳಿಗೆ ಬಾರೇ—
ಓಕುಳಿಯಾಟಕೆ ಸೇರೆ

|| ಮಂದ ಮಾರುತ ||

(ವಸಂತ ಸರಿದು ಬೇಸಗೆ ಕಾಲಿರಿಸಲು)

**ಗ್ರೀಷ್ಮ:** ನಗು ನಗು ನಗು—ವಿರಕ್ತರಿವರು ಪ್ರೇಮಸ ಮರೆತಿಹರು!
ನಗು ನಗು ನಗು—ನಿನ್ನೆಯ ಹುಣ್ಣಿಮೆ ಕಾಮನ ಸುಟ್ಟವರು
ನಗು ನಗು ನಗು—ನಮ್ಮೆಯ ಉಸಿರಿಗೆ ತೇಲುತ ತೂಗುವರು
ನಗು ನಗು ನಗು—ಬಿಸಿ ಉಸಿರನು ಕರೆ—ಜೆವರಲಿ
ಮುಳುಗುವರು.

(ಜನಕ್ಕೆ ತಿರುಗಿ ಬೇಸಗೆಯ ದಣಿವು ಪ್ರಾಪ್ತಿಸುವುದು.)

**ಜನ:** ಬಾರಾ—ಬಾರಾ—ಒಲವನು ತೋರಾ ||



# ಪಾತ್ರ ವರ್ಗ

**ಸೀತೆ—** ಶ್ರೀ ರಾಮಚಂದ್ರನ ಪತ್ನಿ. ಲಕ್ಷ್ಮಣನೊಡನೆ ಋಷ್ಯಾಶ್ರಮವಾಸಕ್ಕೆಂದು ಹೊರಟಿದ್ದಾಳೆ.

**ಲಕ್ಷ್ಮಣ—** ಸೀತೆಯನ್ನು ಕಾಡಿನಲ್ಲಿ ಬಿಟ್ಟು ಬರಲು ಹೊರಟ ಖಿನ್ನಮನಸ್ಕ.

**ವಾಲ್ಮೀಕಿ—** ಋಷಿ, ಸೀತೆಗೆ ಆಶ್ರಯವನ್ನು ಕೊಟ್ಟು ಕಾಪಾಡುವವ

**ಲವ, ಕುಶರು—** ಸೀತೆ ವಾಲ್ಮೀಕಿಯಾಶ್ರಮದಲ್ಲಿ ಹಡೆದ ಮಕ್ಕಳು.

ವಟು, ರಾಮದೂತ ಮೊದಲಾದವರು.



[ಈ ನಾಟಕವನ್ನು ಎರಡು ಮೂರು ಬಗೆಗಳಿಂದ ಯಶಸ್ವಿಯಾಗಿ ಪ್ರದರ್ಶಿಸಲು ಸಾಧ್ಯವಾಯಿತು. ನಟರು ಅಭಿನಯ ಮಾತ್ರ ಮಾಡುತ್ತಿದ್ದು, ಹಿಮ್ಮೇಳದಿಂದಲೇ ಗಾನ ನಿರ್ವಹಿಸಿದ ರೀತಿ ಒಂದು. ಗೀತಾ ನಾಟಕವಾಗಿ ಇನ್ನೊಮ್ಮೆ, ಅದೇ ಗೀತಾ ನಾಟಕವನ್ನೂ ಛಾಯಾ ನಾಟಕದ ರೂಪದಲ್ಲಿ ಆಡಿದುದು ಮೂರನೆಯ ಬಾರಿ.]



# ಒಂದನೆಯ ದೃಶ್ಯ

(ರಾಗ--ಹೋರಿ ಕಾಫಿ)

**ಮೇಳ**— ಹೊರಟಿಹರು ವಿಪಿನಕಾಗಿ | ಬಾ ऽ ऽ ಗಿ | ಸಾ ऽ ऽ ಗಿ ||
ಹೃದಯದೊಳು ಖೇದಭರಿತರಾಗಿ |
ಹೊರಟಿಹರು ವಿಪಿನಕಾಗಿ ||

**ಲಕ್ಷ್ಮಣ**— ಪೇಳ್ವೆನೋ ಪೇಳದಿಹೆನೊ
ಸೋದರನ ಕಡು ಆಣತಿಯನು ||

**ಮೇಳ**— ಎಂದು ಬೆಂದಿಹನೊ
ಮನದಿ ಕುಂದಿಹನೊ
ಜಾನಕಿಯ ಮುಖಗಾಣದಿಹನೊ—
ಈ ಲಚುಮಣನು | ಹೊರಟಿಹನು ವಿಪಿನಕಾಗಿ ||

**ಸೀತೆ**— ತಾಳಲೇ, ತಾಳದಿರಲೇ,
ಮೈದುನನೊಳನುಮಾನ ||
ಏಕೆ ಬಂದಪನೋ
ಕರೆದು ತಂದಪನೋ
ಭೀಕರದ ಕಾನನದೊಳ್ ಏಂ ಬಯಕೆ ಸಂದಪನೋ! ||
ಸಿಂದೆಯೇತಕೆ ಬಂಧು ?
ಮೌನವೇತಕೆ ನಿಂದು ?
ಬಂದಪುದೆ, ಬಂದಪುದೆ—ರಾಘವನೊರೆದಾಶ್ರಮ? ||

ಮೋರೆ ತಗ್ಗಿಪುದೇಕೆ?
ತಿರೆಯು ಕೆರಳುವೆಯೇಕೆ?
ಇನ್ನಿಹುದೆ—ರಾಘವನೊರೆದಾಣತಿ !

ತೊಡೆವ ಕಂಬನಿಯೇನು
ಥರಿಪ ಮುಂದುಟಿಯೇನು !
ಕೊಲೆಗೆ ನಿಂದವನಂತೆ ಅಳುಕದೇನು ||

**ಮೇಳ**— ತಗ್ಗಿಹನೊ, ಬಗ್ಗಿಹನೊ,
ಬಲುವಾಗಿ ಕುಗ್ಗಿಹನೊ,
ಮುರಿದ ಕದಳಿಯ ತೆರದಿ--ಅಡಿಗೆರಗಿ ನುಡಿದಿಹನೊ,
ಕಂಬನಿಯು ಮಿಡಿದಿಹನೊ,
ಅಧರಗಳ ಪಿಡಿದಿಹನೊ ॥

(ರಾಗ --ತಿಲಂಗ್)

**ಲಕ್ಷ್ಮಣ**— ನುಡಿಯಲೊಲ್ಲದ ಮಾತ
ನುಡಿಸುವನೆ ವಿಧಾತ
ಪಡೆದು ಬಂದೆನೊ ಎಂಥ---ಕಜ್ಜವಿದು ದುರಂತ !
ಕಾಡಿನೊಳು ತೊರೆವಂತೆ,
ಒರೆದಿಹೆರು, ಕಡು ಚಿಂತೆ,
ನಾಡಿನೊಡೆಯನ ಮಾತ ನಡೆಸುವೆನೆ ಜಿಡೆನೆ !!

**ಸೀತೆ**— ಯಾರ್--ರಾಘವನೇ ?
ತಾನ್---ಪೇಳಿದನೇ !
ಆವ ತಪ್ಪಿತಕೆಂದು--ಒರೆದಿಹನೇ ?

**ಲಕ್ಷ್ಮಣ**— "ಪರಗೃಹದಿ ಬಾಳಿದಳ
ಪರಿವಿಡಿದ ರಾಘವನು
ಪೊರೆಯಲಾರನು ಧರ್ಮ" ಎಂಬ ಜನತೆಯ ದೂರ....

**ಸೀತೆ**— "ಸಾಕು---ಸೌಮಿತ್ರಿ
ಬೇಡವೀ ಮಾತು !
ಆರ ತಪ್ಪೂ ಇಲ್ಲ
ಆವ ಒಪ್ಪೂ ಇಲ್ಲ
ತಪ್ಪು ಸೀತೆಯದಲ್ಲ
ಪೆಣ್ಣಾಗಿ ಪುಟ್ಟಿದುದೆ
ಹಿರಿಯ ಅಪರಾಧವಲಾ !

ಕರುಣಾಳು ರಾಘವನ
ದೂರುವುದೆ ನಿಷ್ಫಲ ।

**ಮೇಳ**— ಅ ಡಿ ಯ ಹಿ ಂ ದೆ ಳೆ ದು ।
ನು ಡಿ ಯ ತಾ ಂ ಕ ಳೆ ದು
ಅಡವಿ ದೇವಿಯ ನೆಚ್ಚಿ । ಜಾನಕಿಯ ಬಿಟ್ಟಿಕ್ಕಿ
ಪೋದಪನೊ ॥

[ ಲಕ್ಷ್ಮಣನು ಬಲುವಾಗಿ ನೊಂದು, ಅನುಮಾನಿಸಿ ಅನುಮಾನಿಸಿ ಹಿಂದೆರಳುವನು.]

(ರಾಗ—ಮುಲ್ತಾನಿ)

**ಮೇಳ**— ಜಾನಕಿ ವಿಸ್ಮೃತಳಾಗಿಹಳು ॥
ಕಾನನದೊಳು ಕಂಗೆಟ್ಟಿಹಳು ॥ ಜಾನಕಿ ॥
ವಟುಗಳದಾರೋ ಬರುತಿಹರು
ಕಾಣುತಲಬಲೆಯ—ಬೆಚ್ಚಿಹರು!
ಪರ್ಣಕುಟೀರಕೆ ಸಾಗಿಹರು
ವಾಲ್ಮೀಕಿಯ ಕರೆತಂದಿಹರು ॥
ಜಾನಕಿ ವಿಸ್ಮೃತಳಾಗಿಹಳು! ।

ಅಬಲೆಯ ಕಾಣುತೆ ।
ಮೆಲುವಿಂದೆತ್ತುತೆ ।
ಜಲವನು ಎರಚುತೆ ।
ಸಲಿಸಲ್ ಉಪಚಾರ ।

**ಸೀತೆ**— "ರಾಮಾ ರಾಮಾ"—ಎಂದೊರಲಿದಳು ।

**ಮೇಳ**— ಆ ಮಾತವಸಿಯ ನೋಡಿಹಳು ।
ತಾನಾರೆಂಬುದನರುಹಿದಳು ।.
ಪ್ರೇಮಾಶ್ರಯವನು—ಗಳಿಸಿಹಳು!

—o()o—

## ಎರಡನೆಯ ದೃಶ್ಯ

(ರಾಗ—ಶಂಕರಾ)

**ಮೇಳ**— ಪೊಂದಿಹಳ್ಳೆ ಸುಖವಾ । ಸುಖವಾ ।
ತಳೆದಿಹಳ್ಳೆ ನಗುವಾ । ನಗುವಾ ।
ನವನುಮುಸಮುರಾ—ಲವ ಕುಶರೆಂಬವರ ।
ಪೆತ್ತು—ಪೊಂದಿಹಳ್ಳೆ ಸುಖವಾ
ವಾಲ್ಮೀಕಿಯ ದಯ
ವಟುವಮಿಯರ ನಯ
ಕುವರರಿಂ ವಿಸ್ಮಯ । ಜೀವಿತಕೆ ಅಭಯ ॥

ದಿನದಿನ ಬೆಳಗಿವೆ
ಭಾರವು ಕಳೆದಿವೆ
ಜೀವನ ಸೊಗಸಿವೆ—ಇನ್ನೇಂ ಬೇಕಿಹುದು ! ॥

ಬಾಲರ ಕುಲಘನ
ಶೀಲ ಮತ್ತೆಳತನ
ಲೀಲೆಗಳ್ ಸಿರಿತನ—ಜಾನಕಿಯು ಸುಮನೆ ॥

ಬಾಲರ ಕುಲಕೆ
ಪಲ್ಲವ ಕಲಿಕೇ
ಗುರುವಿಂದವಕೆ— ದೊರೆತಿವೆ ಯಶಕೆ !
ಪೊಂದಿಹಳ್ಳೆ ಸುಖವಾ । ಸುಖವಾ ।
ತಳೆದಿಹಳ್ಳೆ ನಗುವಾ । ನಗುವಾ ।

---o()o---

## ಮೂರನೆಯ ದೃಶ್ಯ

[ಅಶ್ವಮೇಧದ ಕುದುರೆಯನ್ನಟ್ಟಿಕೊಂಡು ರಾಮದೂತನೊಬ್ಬನು ಪ್ರವೇಶಿಸುವನು.]

( ರಾಗ - ಭೂಪ )

**ರಾಮದೂತ**: ಆರು? ಆರು? ಆರು?
ತಡೆಯುವರುಂಟು
ರಾಮನಟ್ಟಿದ ಹಯವ?
ಧಾರುಣಿಯೊಳ್ ಆ ರಾಮನೇ ರಾಮ—ಏಕೈಕ ರಾಮ ||
ಆರು, ಆರು—ಕಲಿತನದಿಂದ
ಸಾರಿ ತಡೆಯುವರಿದನು
ಹೋರಿ ಕಾದುವರುಂಟು—ರಾಮನೊಡೆತನ
ಕಿದಿರು ಉಂಟು? ||

**ಮೇಳ**— ಸಾರುತಿಹನೂ—
ರಾಮ ಭಟನು !

**ದೂತ**— ಆರು ಆರು ಆರು
ತಡೆಯುವರುಂಟು— ..

**ಮೇಳ**— ಆಲಿಸಿಹರೂ
ಬಾಲರವರೂ
ಧಾವಿಸಿಹರು
ತಡೆದೆ—ಇಹರು

ಬೇಡವೆಂದೊರೆದರು
ಮೋಡಿಲಿ ಜರೆದರು

**ಲವ ಕುಶರು**—ನೋಡಿಕೊಂಬೆವು ನಾವು
ಮೂಢ ಚಾಕರ, ಪೋಗು
ಕೂಡಿ ಬಾ ಒಡೆಯನ
ನೋಡುವೆವ್ ಹೆದಸ !

**ಮೇಳ**— ಎಂದು ಕಳುಹೇ !
ಹೋದನರುಹೇ !

ಹೆಯವ ತಡೆದುದ ಕೇಳಿ
ಕೌತುಕವ ಬಲುತಾಳಿ
ಸೌಮಿತ್ರಿ ಕಾದಾಳಿ ।
ಬಂದ ಗಳಿಗೆ—
ನಿಂದ ಅಡಿಗೆ—
ಕಣೆಯು ಹತಿಗೆ—
ಉರುಳೆ ಧರೆಗೆ—

ಸೋದರನ ಪರಿ ಕೇಳಿ
ರಾಘವನೆ ಎದುರಾಳಿ !
ವೀರ ರೌದ್ರವ ತಾಳಿ
ಬಂದ ಗಳಿಗೆ—
ನಿಂದ ಅಡಿಗೆ—
ಬೀಳ್ದ ನಿಳೆಗೆ !
ಕಣೆಯು ಹತಿಗೆ !

ಗೆದ್ದುದನು ತಿಳುಹಲ್ಕೆ—
ಬಿದ್ದವರ ತೋರಲ್ಕೆ
ಗುರುವರನ ಶಿಕ್ಷೆ ಫಲಿಸಿದಕಾಗಿ—ವಂದಿಸಲಲ್ಕೇ
ಸಾಗುತಿಹರು
ತರಳರವರು ।



## ನಾಲ್ಕನೆಯ ದೃಶ್ಯ

[ರಾಮ ಲಕ್ಷ್ಮಣರ ಆಭರಣಗಳನ್ನು ಕರದಲ್ಲಿ ಹಿಡಿದು ಅಳುತ್ತ ಬರುವಳು.]

(ರಾಗ— ಜೀವನ್‌ಪುರಿ)

**ಸೀತೆ—** ಆತನೆ ಆತನೇ ಇಹನೇನೋ

**ಮೇಳ**— ಎಂಬ ಭೀತಿಯನುಂಡು
ತುಂಬ ಕಾತರಗೊಂಡು
ಲವ ಕುಶರ ಜೆಂಗೊಂಡು— ಬಂದಳಾಕೆ

[ಮಡಿದು ಬಿದ್ದಿರುವ ರಾಮ ಲಕ್ಷ್ಮಣರನ್ನು ಕಂಡು.]

**ಸೀತೆ**— ದಾತನೇ ಖ್ಯಾತನೇ ವಿಖ್ಯಾತನೇ
ಅಹುದಲ್ಲ!
ತನ್ನ ಕರುಳಿಗೆ ತಾನು
ಬಲಿಯಾಗಿ ಬಿದ್ದಪನೇ!
ಜತೆಗನುಜ ಲಕ್ಷ್ಮಣನೇ—ಆತನೇ .... ....

(ರಾಗ—ಭೈರವಿ)

**ವಾಲ್ಮೀಕಿ** ಶೋಕಿಸದಿರು ತಾಯೆ ! ಇದು ಮಾಯೆ !
ಲವಕುಶ ಶರಹತಿ । ಇಂದಾಯಿತು ಈ ಕೃತಿ ,
ತೊರೆವುದು ಕಡು ಖತಿ । ಈಯುವೆ ನಾ ಸ್ಮೃತಿ !

ಅಂಬುಜ ನಯನರೆ,
ಅಂಬಿನಿಂದಿರಿವರ
ತುಂಬುಗಣ್ಣಿಂ ನೋಡಿ
ಚರಣದೊಳ್ ಕ್ಷಮೆ ಬೇಡಿ !

**ಲವ ಕುಶ**—"ಚರಣದೊಳ್ ಕ್ಷಮೆ ಬೇಡಿ !"
ಯಾರಿಹರೀ ಜನರು ?
ಯಾರಮ ಈ ವಿಜಯ ?

**ರಾಮ**— ಯಾರೀಹರೀ ಸುಮರು ?

**ವಾಲ್ಮೀಕಿ**—ನಿನ್ನಿಜಕುಲ ಸಂಭವರು

**ಲವ ಕುಶರು**—ಏನಿಹುದೀ ಕತೆಯು
ಮೀರುತಲಿದೆ ಅರಿವು!

**ವಾಲ್ಮೀಕಿ**— ರಘುಕುಲೋದ್ಭವ ರಾಮ
ತಳಿಕುವರರೊಳು ಪ್ರೇಮ!
ತೊರೆದ ಜನಕಜೆಯಿವಳು
ಪರಿಗ್ರಹಿಸಿ ಬಾಳು, ಗುಣಧಾಮ!

**ರಾಮ**— ಆರಿವಳು? ಜನಕಜೆಯೇ!
ಬನದಿ ತವ್ಮಾಶ್ರಮದಿ
ಕುಲವ ಬೆಳಗಿದಳೆ!

**ವಾಲ್ಮೀಕಿ**—ಕ್ಷಮಿಸುವೆಯಾ?

**ರಾಮ**— ಕಿಚ್ಚ ಪುಗುತಲಿ ತಾನು
ನಿಚ್ಚ ಶುದ್ಧಿಯ ತೋರೆ...............

**ಮೇಳ**— ಮಾತು ನಿಂದಿಹುದಲ್ಲ
ಮಮತೆ ಕಳೆದಿಹಳಲ್ಲ
ಗುರುಜನವ ವಂದಿಸುತೆ
ನುಡಿವಳಲ್ಲ—

**ಸೀತೆ**— ಕರುಣಾಳು ರಾಘವಗೆ
ಸಲದ ಮಡದಿಯು ನಾನೆ!
ಋಣನ ಕಡಿಯುತೆ ಭವದ
ನೆಲನ ಪುಗುತಿಹೆನೋ!
ವಂದಿಪೆನೊ! ಇದೋ
ನಾಂ-ಪರಕೆ ಸಂದಪೆನೋ



# ಪಾತ್ರಗಳು

(ಕಾಲ:—ಕ್ಷಯ ಸಂವತ್ಸರದ ಕೊನೆಯ ದಿನ. ಮರುದಿನವೇ ಪ್ರಭವ ಸಂವತ್ಸರದ ಯುಗಾದಿಯು ಬರಲಿದೆ.)

**ಅವಧೂತ:—** ಚಿರವಾದ ಸತ್ಯವನ್ನು ಸಾರುತ್ತ ಸಂಚರಿಸುವ ಒಬ್ಬ ಸಾಧು.

**ನವಗುರು:—** ಅವಧೂತನ ಮಾತನ್ನು, ತನ್ನದೇ ಅರ್ಥದಿಂದ ತಿಳಿದು ಜಗತ್ತನ್ನು ಎಚ್ಚರಿಸುವ ಒಬ್ಬ ಹೊಸಯುಗದ ಸನ್ಯಾಸಿ.

**ಫಲ್ಗುಣ.—** ಚೈತ್ರಿಯ ತಂದೆ—ಅಳಿಯನನ್ನು ಹುಡುಕುವ ಮಾನ.

**ಹೇಮಂತ:—** ತನ್ನ ಆಸ್ತಿ—ಪಾಸ್ತಿಗಳನ್ನು ವಿಕ್ರಯಿಸಿ, ಬದಲು ಪುಣ್ಯ ಸಂಪಾದನೆ ಮಾಡಬೇಕೆಂದು ಯತ್ನಿಸುವ ವ್ಯಾಪಾರಿ.

**ವಸಂತ:—** ಯುಗಾದಿಗೆ ಬರಲಿರುವ ಮದುವಣಿಗ. ಚೈತ್ರಿಯ ಪ್ರಣಯಿ.

**ಚೈತ್ರಿ:—** ಫಲ್ಗುಣನ ಗೆಳತಿ.

**ನಿದ್ರಾ:—** ಹೇಮಂತನ ಮಡದಿ.

**ವಿಶಾಖ**
**ವಿನಾದ**
**ವಿರಾಗ** | ಊರಲ್ಲಿ ಉದ್ಯೋಗವಿಲ್ಲದ ಅಲೆಯುವ ಉಂಡಾಡಿಗಳು.



# ಅಂಕ ೧

(ನಿರ್ಜನವಾದ ಒಂದು ಪ್ರದೇಶ. ಅವಧೂತನು ಹಾಡುತ್ತ ಬರುವನು. ಅವನ ಹಾಡನ್ನು ಕೇಳಿ ಪೆಲ್ಲಗೆ--ನವಗುರುವು ಬಂದು ಆಲಿಸುವನು. ಅವನೊಡನೆ ಮಾತನಾಡಿ ಮಾತಿನ ಅರ್ಥ ತಿಳಿದವನಂತೆ ತೋರಿಸಿಕೊಳ್ಳುವನು.)

(ರಾಗ—ಭೈರವಿ)

**ಅವಧೂತ:—** ನೀಲವಾಗಿಹುದು ಆಕಾಶ
ಮುಗಿಲ ಕುಣಿತವು ಮಿಗುವ ತೋಷ
ಬರಿದಾಗಿಹುದು ಈ ದೇಶಾ
ಜಗದ ಜಡತೆಯ ಫಲವೆ ಕ್ಲೇಶ

ಬಾನೊಳಗೆ ಮಿರುಗುವುವು ತಾರಾ
ವಿಶ್ವಕ್ಕೆ ಬೆಳಕಿಹುದು ಸಂಸಾರ
ಮನದೊಳಗೆ ಮರುಗುವುದು- ದೇಹ
ಘನತರದ ಬಾಳ್ಕೆಯೊಳೆ---ತೋಷ

ಏಕವಾಗಿರಲು ಆಕಾಶ
ಮುಗಿಲು ತೊಟ್ಟಿತು ಹಲವು ವೇಷ
ಶೂನ್ಯವಾಗಿರಲು ಮನ ಹಾಸ
ಅದುವೆ ನಿಜ ಕಲಿರಾಯನಾವಾಸ

(ಹಾಡನ್ನು ಕೇಳಿ ದಾರಿಸಾಗುತ್ತಿರುವ ನವಗುರುವು ಅಲ್ಲಿಗೆ ಬಂದು ಅವಧೂತನನ್ನು ಮಾತನಾಡಿಸುವನು.)

**ನ:—** ಏಕೆ ಹಾಡುವೆಯ ಏ ದಾಸ ?
ಅರ್ಥವಾಗದು ನನಗೆ ಈ ವೇಷ!
ಬೇಡುವೆಯ ನೀನೇನು ಕಾಸ ?
ಅದಕೇನು ಸಂಗೀತ—ವೋಸ ? ||

ಅ:— ನೀಲವಾಗಿಹುದು ಆಕಾಶ
ಮುಗಿಲ ಕುಣಿತವು ಮಿಗುವ ತೋಷ !
ಕಾಸಿಹುದು ಅದರ ಉಲ್ಲಾಸ !
ಬೇಕಿಲ್ಲ ಜೀವನಕೆ ಪೋಷ !

ನ:— ನೀನೇನು ಸಾಧುವೇ—ಪ ದಾಸ !
ಕ್ಷೇಮವೇ ನಿನ್ನೊಡನೆ ಸಹವಾಸ ?
ಕಾಣು ನೀತಿಪ [illegible] ನೀನೀಶ.
ನೀಡೆನಗೆ—ಜನದೊಳಗೆ ಉಪದೇಶ !

(ಒಂದು ಕಾಲೂರಿ ಅವನನ್ನು ನಮಸ್ಕರಿಸುವನು)

ಅ:— ನೀಲವಾಗಿಹುದು ಆಕಾಶ !
ಮುಗಿಲ ಕುಣಿತವು ಮಿಗುವ ತೋಷ !
ಬರಿದು ಆಗಿಹುದು ನಿನ್ನ ದೇಶ !
ಇದುವೆ ಲಾಲಿಸು ನಿನಗುಪದೇಶಾ !

ನ:— 'ನೀಲವಾಗಿಹುದು ಆಕಾಶ !'
ಅ:— 'ನೀಲವಾಗಿಹುದು ಆಕಾಶ !
ಮುಗಿಲ ಕುಣಿತವು ಮಿಗುವ ತೋಷಾ !'

ನ:— ಮುಗಿಲ ಕುಣಿತವು ಮಿಗುವ ತೋಷಾ !
ಅ:— ಬರಿದು ಆಗಿಹುದು ಈ ದೇಶ !
ನ:— ಬರಿದು ಆಗುವುದೇ ಈ ದೇಶ !
ಅ:— ಜಗದ ಜಡತೆಯ ಫಲವೆ ಕ್ಲೇಶ !
ನ:— ಜಗದ ಜಡತೆಯ ಫಲವೆ ಕ್ಲೇಶ !
ಇದು ಏನೆ—ನೀನೀವ ಉಪದೇಶ ?
ಬರಿದು ಆಗುವುದೆ ಈ ದೇಶ !
ವರಗುರುವೆ ನಮಿಸುವನು ಈ ದಾಸ !
ಬೆಳಕು ತೋರಿದೆ ನೀನು—ಉಪದೇಶ ॥

**ಅ:—** ನೀಲವಾಗಿಹುದು ಆಕಾಶ।
ಮುಗಿಲ ಕುಣಿತವು ಮಿಗುವ ತೋಷ ॥
ಬರಿದಾಗಿಹುದು ಈ ದೇಶ।
ಜಗದ ಜಡತೆಯು ಫಲವೆ ಕ್ಲೇಶ ॥ (ತೆರಳುವನು)

(ದೊರೆತ ಉಪದೇಶದಿಂದ ಪುಲಕಿತನಾಗಿ. ಜಗತ್ತಿಗೆ ತಾನು ಉಪದೇಶ ಮಾಡುವೆನೆಂದು ಎಲ್ಲರನ್ನು ಕರೆಯುವನು.)

**ನ:—** ಏ ಮೂಢ ಜಗವೇ !
ಏ ಹೀನ ಜಗವೇ !
ತ್ವರೆ ಬನ್ನಿ ಜಗವೇ !
ನಿಜಸತ್ಯ ಒರೆವೆ !

(ಅದಕ್ಕೂ ಗಟ್ಟಿಯಾಗಿ)

ಏ ಮೂಢ ಜಗವೇ !
ಏ ಹೀನ ಜಗವೇ !
ತ್ವರೆ ಬನ್ನಿ ಜಗವೇ—
ನಿಜ ಸತ್ಯ ಒರೆವೆ !

(ಇನ್ನೂ ಗಟ್ಟಿಯಾದ ಧ್ವನಿಯಿಂದ)

ಏ ಮೂಢ ಜಗವೇ
ಏ ಹೀನ ಜಗವೇ
ತ್ವರೆ ಬನ್ನಿ ಜಗವೇ
ನಿಜಸತ್ಯ ಒರೆವೆ........

ಈ ಕೂಗನ್ನು ಕೇಳಿ ಫಲ್ಗುಣ ಹೇಮಂತರು ಅಲ್ಲಿಗೆ ಧಾವಿಸಿ ಬರುವರು

**ನ:—** ಏ ಮೂಢ ಜಗವೇ...........
**ಫ:—** (ನಡುಗಿ) ನಾ ಬಂದೆ.....ಗುರುವೇ !
ಫಲುಗುಣನು........ಗುರುವೇ !
**ನ:—** ಏ ಹೀನ ಜಗವೇ !

ಹೇ:— ನಾ ಬಂದೆ...............ಗುರುವೇ!
ಹೇಮಂತ...............ಗುರುವೇ!

ನ:— ತ್ವರೆ ಬಂದಿರೇನು!
ನಿಜ ಸತ್ಯವೇನು?

ಫ:— ನಿಜ ಸತ್ಯವೇನು!

ಹೇ:— ಸತ್ಯ ನಿಜವೇನು?

(ರಾಗ—ಯಮುನ್)

ನ:— ದಿವ್ಯತಪದೊಳು ಎನಗೆ ಗುರುದೇವನೊರೆದಿಹನು!
ಪರಮಸತ್ಯವನೊಂದ—ಅರಿತಿಹುದೆ ಮೂಢ ಜಗ?

ಫ:— ಅರಿತಿಲ್ಲ! ಅರಿತಿಲ್ಲ!

ಹೇ:— ಅರಿತಿಲ್ಲ! ಅರಿತಿಲ್ಲ!

ನ:— ಪರಮಸತ್ಯವನೊಂದ—ಅರಿತಿಹುದೆ ಮೂಢ ಜಗ!
ಅರಿತಿಲ್ಲ!

ನೋಡುವುದು ಗಗನವನು—ದೃಷ್ಟಿ ಮೇಲಕೆ ಎತ್ತಿ!
ನೋಡುವುದು ಮುಗಿಲುಗಳ—ಕತ್ತು ಮೇಲಕೆ ಎತ್ತಿ!
ಪೇಳುವೆನು ಸತ್ಯವನು—ಸತ್ಯವೆಂಬುದ ತತ್ತಿ!
ಬಿಡಿಸಿಡಿರಿ, ಬಿಡಿಸಿಡಿರಿ ನಿಮ್ಮ ಚಿತ್ತ-ಭಿತ್ತಿ!

ಹೇ:— ಬಿಡಿಸಿದೆವು ಬಿಡಿಸಿದೆವು—ನಮ್ಮ ನೆತ್ತಿ!

ಫ:— ಬಿಡಿಸಿದೆವು ಬಿಡಿಸಿದೆವು ನಮ್ಮನ್ನೆತ್ತಿ!

ನ:— ನೀಲವಾಗಿಹುದು ಆಕಾಶ!

ಹೇ:— ಅಹುದು ಆ ಕಾ ಶಾ!

ಫ:— ಅಹುದು ಆ ಕಾ ಶಾ!

ನ:— ಮುಗಿಲ ಕುಣಿತವು ಮಿಗುವ ತೋಷ!

ಹೇ:— ಮುಗಿಲ ಕುಣಿತವೆ-ಅಹುದು ತೋಷ!

ನ:— ಬರಿದಾಗುವುದು ಈ ದೇಶಾ!

ಹೇ:— ಬರಿದಾಗುವುದು ಈ ದೇಶಾ (ಗಾಬರಿಯಿಂದ)

ನ:— ಜಗದ ಜಡತೆಯ ಫಲವೆ ಕ್ಲೇಶಾ!

**ಘ:—** ಬರಿದಾಗುವುದು........ಈ ದೇಶಾ ! (ಬಿದಂ)
ಜಗದ ಜಡತೆಯ ಫಲವೆ ಕ್ಲೇಶಾ !

**ಹೇ:—** ಹಾಗಾದರಂತು ಬಲು ಮೋಸಾ !

**ಘ:—** ನಿಜಕು ಇದರಿಂದ ತ್ರಾಸಾ .

**ನ:—** ನಿಜ ನಿಜ-ಕೂಡುತಿದೆ ನಮ್ಮ ಪ್ರಾಸಾ !
ಅಂತಿರೇಂ ಇದರರ್ಥ — ಮೂಢ ಪಶುಗಳೆ ನೀವು !
ಕಲಿಯುಗದ ನೋಟಗಳೆ, ಭಾರತಿಯ ಕೀಟಗಳೆ,
ವರುಷವಾವುದು ಇದುವೆ--ಅರಿವುಂಟೆ ನಿಮಗೆ !

**ಘ:—** ಕ್ಷಯನಾಮ ವತ್ಸರವು !

**ನ:—** ಕ್ಷಯನಾಮ ವತ್ಸರವು.
ಮಾಸವಾವುದು ಪೇಳು ?

**ಘ:—** ಮಾಸವಿದು ದ್ವಾದಶವು !

**ನ:—** ದಿನವಿದಾವುದು ಪೇಳು ?

**ಹೇ:—** ಕೊನೆಯ ಒಂದೇ ದಿನವು !

**ನ:—** ಉಳಿದಿಹುದು ದಿನವೊಂದೆ—ಎಲೆ ಹೀನ ಜಗವೆ !
ಅದರೊಳಗೆ ಮಾಡುವುದು ನಿಮ್ಮಗಳ ಮದುವೆ !

**ಘ:—** ನಮ್ಮಗಳ ಮದುವೆ !

**ನ:—** ಅದರೊಳಗೆ ಮಾಡುವಿರಿ ನೀವೆಲ್ಲ ದಾನಗಳ !
ಅದರೊಳಗೆ ತ್ಯಜಿಸುವುದು, ಈ ಇಳೆಯ ಪಾಶಗಳ !

**ಹೇ:—** ನನ್ನಾಸ್ತಿ ದಾನಗಳ !

**ನ:—** ಕ್ಷಯವು ಬಂದಿದೆಯ್ಯಾ !
ಜಗದ ಬಾಳ್ವಿಗೆ ನೋಡು !
ಉಳಿದುದೊಂದೇ ದಿನವು !
ಜವದೊಳಗೆ ನೀ ನೋಡು !
ದಾನ ಗೈವುದ ಗೈದು,
ಈ ದಿನವು ಮುಗಿಯಲ್ಕೆ,
ಸಗ್ಗವೇರುವ ಸಿದ್ಧತೆಯ ಗೈಯಬೇಕು !

ನಾಳೆ ಎಂಬುದು ಇಲ್ಲ ! ಬದುಕುವರೆ ಎಡೆಯಿಲ್ಲ !
ಕ್ಷಯುವತ್ಸರವು ಮುಗಿಯೆ—ಕ್ಷಯುವೆಲ್ಲ ಜೀವ.

**ಘ**:— ಏನೇನು ! ಕ್ಷಯುವತ್ಸರವು ಮುಗಿಯೆ ಕ್ಷಯವೆಲ್ಲ ಜೀವ !
ನಾಳೆಯೆಂಬುದು ಇನ್ನು ಬರಲಾರದೇನು ?

**ನ**:— ನಾಳೆಯೆಂಬುದು ಇನ್ನು ಭಾಗ್ಯವಿಲ್ಲದ ಹೆಣ್ಣು !
ನಾಳೆಯೆಂಬುದು ಇನ್ನು ದೀಪವಿಲ್ಲದ ಕಣ್ಣು !
ನಾಳೆಯೆಂಬುದು ಇನ್ನು ಬೆಳೆಯು ಇಲ್ಲದ ಮಣ್ಣು !
ನಾಳೆಯೆಂಬುದು ಇನ್ನು ಸವಿಯು ಇಲ್ಲದ ಹಣ್ಣು !

**ಘ**:— ನಾಳೆ ಇಲ್ಲದ ಮ್ಯಾಲೆ ! ಇಂದಿನಾ ಗತಿ ಹೇಳು ||
ಇಂದೆ ಇರುವಳು ಮಗಳು, ಮದುವೆ ಇಲ್ಲದ ಗೋಳು ||

(ರಾಗ—ಅಸಾವೇರಿ)

**ನ**.— ಮದುವೆ ಇಲ್ಲದ ಮಗಳ !
**ಘ**:— ಅಳಿಯನಿಲ್ಲದ ನಾನು
**ನ**:— ಅಳಿಯನಿಲ್ಲದೆ ಮೋಕ್ಷ ಗೆಳೆಯ—ಇಲ್ಲವು ನೋಡು !
ಮದುವೆ ಇಲ್ಲದ ಮಗಳ, ಹೊಳೆಗೆ ತಳ್ಳುತ, ಓಡು ||
ನಾಳೆಯುಗ ಮುಗುಚುವುದು,
ಹಾಳು ಯುಗ ಬರಲಿಹುದು !
ಪುಣ್ಯಸಂಪಾದನೆಗೆ-ಬಲು ಕಷ್ಟವೂ ||

**ಘ**:— ಏನ ಗೈಯಲು ಬೇಕು, ಪೇಳು ಧೊರೆಯೇ !
**ನ**:— ನಾಳೆ ಉದಯಿಪ ಮೊದಲು
ಹಾಳು ಮಗಳನು ಮಾರು,
ಗೊಳ ತಪ್ಪಿಸಿಕೊಳ್ಳು ಮಾವತ್ವದ ||

**ಘ**:— ಬೇಗ ಪೋಗುವೆ ಗುರುವೆ ! ಇಂದೆ ಮಾರುವೆ ಮಗಳ !
ಈಗಲೇ ತೊಡಗಿದೆನು ವಿಕ್ರಯವನು:
ಗೆಳೆಯರೇ ! ಬಂಧುಗಳೆ, ಇತ್ಯಾದಿ ಜನಗಳೇ—
ಯಾರಾದರೂ ಚಿಂತೆ ಇಲ್ಲವೆನಗೆ !

ಬೇಕೆನಗೆ ಬಲುಬೇಗ ಅಳಿಯನೊಬ್ಬನು ನೋಡಿ
ಬಯಸಿ ಬರುವರು ಬನ್ನಿ—ಓಡಿ ! ಓಡಿ !
ಇನ್ನಿಲ್ಲ-ವಂಥ ಮಗಳು !
ಸೊಗಸಿನೊಳು ನಗುವ ಮುಗುಳು !
ಕೆಲಸಕ್ಕೆ ಚಿನ್ನದಗಳು ! (ಕೂಗುತ್ತ ತೆರಳುವನು)

(ರಾಗ-ಭೀಮಪಲಾಸ್)

ನ:— ನಿನೇಕೆ ಅಳುತಿಹೆಯ, ಎನ್ನ ಶಿಷ್ಯ !
ನೀನೇಕೆ ಅಳುತಿರುವೆ ಎನ್ನ ಶಿಷ್ಯಾ,
ಮಗಳಿಹಳೆ ನಿನಗೂವೆ ಎನ್ನ ಶಿಷ್ಯಾ !

ಹೇ:— ಗು-ರು....ರಾಯಾ...........

ನ:— ಬಿಡು ಭಯಾ...........

ಹೇ:— ಇಡು ದಯಾ-...........

ನ:— ಜಗಮಾಯಾ....ಎನ್ನ ಶಿಷ್ಯಾ !
ನೀನೇಕೆ ಅಳುತಿಹೆಯ ಎನ್ನ ಶಿಷ್ಯಾ ||

(ರಾಗ--ಜಂಜೂಟಿ)

ಹೇ.— ಮಗಳು ಇಲ್ಲಾ, ಬರಿಯ ಮಡದಿ
ನೆರಿಗೆ ಮುಖದಿ, ಹೊರೆಯು ಗಡದಿ
ಆದರೇನು ಆಸ್ತಿ ಬಹಳ ! ತೋಟ-ಗೀಟ ದೊಡ್ಡ ಮೇಳ !

ನ:— ಅಯ್ಯೊ ಮರುಳಾ ! ತ್ಯಜಿಸು ಗೋಳಾ !
ನಾಳೆ ಬಹುದು ಕಠಿಣ ಕಾಲಾ !
ಇಂದೆ ಎಲ್ಲ ತ್ಯಜಿಸು ಮೂಳ ! ನೆಲವು ಅಲ್ಲ ಬರಿಯ ಧೂಳ !

ಹೇ:— ಈಗ ಹೊರಟೆ, ಇಂದೆ ಹೊರಟೆ, ನಾಳೆ ಬರುವ ಮೊದಲೆ ಹೊರಟೆ.

ಎಲ್ಲ ಜನರೇ, ಕೇಳಿರೆನ್ನ—
ಎನ್ನ ತೋಟ ನಿಜಕು ಚಿನ್ನ.
ಎನ್ನ ಭೂಮಿ ತೊಳೆದ ರನ್ನ.
ಬೆಲೆಯ ಕೊಟ್ಟು ಕೊಳ್ಳಿರಣ್ಣ.

ನ:— ನೀಲವಾಗಿಹುದು ಆಕಾಶಾ
ಮುಗಿಲ ಕುಣಿತವು ಮಿಗುವ ತೋಷ.
ಬರಿದು ಆಗುವುದು ಈ ದೇಶಾ
ಜಗದ ಜಡತೆಯ ಫಲವೆ ಕ್ಲೇಶಾ ॥ (ತೆರಳುವನು)

(ವಿಶಾಖ--ವಿರಾಗ--ವಿನಾದರು ಬರುವರು)

(ರಾಗ--ಭೂಪ)

**ಮೂವರು**:—ಮೂವರು ನಾವು, ವಿಶಾಖ-ವಿರಾಗ-ವಿನಾದಾ !
**ವಿನಾದ**:— ವಿಶಾಖನಿವನು !
**ವಿರಾಗ**:— ವಿರಾಗ ನಾನು !
**ವಿಶಾಖ**:— ವಿನಾವನುಳಿದವನು !
**ಮೂ**:—ಮೂವರು ನಾವು, ವಿಶಾಖ-ವಿರಾಗ-ವಿನಾದ !
**ವಿನಾ**:—ಮುಂದಿನ ದಿನವು
**ವಿರಾ**:—ಹಿಂದಿನಪಲ್ಲವು !
**ವಿಶಾ**:—ಬದುಕಲು ಎಡೆಯಿಲ್ಲವು ॥
**ಮೂ**:—ಮೂವರು ನಾವು-ವಿಶಾಖ-ವಿರಾಗ-ವಿನಾದ.
**ವಿನಾ**:—ನಾಳೆಗೆ ಇಲ್ಲದು
**ವಿರಾ**:—ಇಂದಿಗೆ ಸಲ್ಲದು,
**ವಿಶಾ**:—ಅದುವೇ ನಿಜವಿಹುದು !
**ಮೂ**:—ಮೂವರು ನಾವು—ವಿಶಾಖ—ವಿರಾಗ—ವಿನಾದ.
**ವಿನಾ**:—ನಿನ್ನೆಯ ಕಾಣದೆ
**ವಿರಾ**:—ಇಂದೇ ಬದುಕದೆ
**ವಿಶಾ**:—ನಾಳೆಗೆ ಎಲ್ಲಿ ಇದೆ ?
**ಮೂ**:—ಮೂವರು ನಾವು—ವಿಶಾಖ—ವಿರಾಗ—ವಿನಾದ ॥
**ಘ**:— (ಪ್ರವೇಶಿಸಿ) ಮಗಳಿಹಳು ಎನಗೆ—ಅಳಿಯಂದಿರಿಲ್ಲ !
ಅಳಿಯಂದಿರಿಲ್ಲ !
ಚಿನ್ನದಂಥಾ ಮಗಳು !
**ವಿನಾ**:—ಇನ್ನಷ್ಟು ನೀ ಹೊಗಳು !
**ಘ**:— ಮುತ್ತಿನಂಥಾ ಮಗಳು !

**ವಿಶಾ**:---ಬಾಯ್ಬಿಟ್ಟು ನೀ ಬೊಗಳು !

**ಘ**:--- ವಜ್ರದಂಥಾ ಮಗಳು !

**ವಿನಾ**:---ಸರಮಾಡಿ ಕೊಡು ನಿನ್ನ ಕೊರಳು !

**ಮೂ**:---ಮೂವರು ನಾವು---ವಿಶಾಖ-ವಿರಾಗ---ವಿನಾದ !

**ವಿನಾ**:---ವಿಶಾಖನಿವನು

**ವಿರಾ**:---ವಿರಾಗ ನಾನು,

**ವಿಶಾ**:---ವಿನಾದನುಳಿದವನು !

**ಘ**:--- ಮೂವರು ಬೇಡ ! ಒಬ್ಬನೆ ಸಾಕು !
ಅಳಿಯನು ಬೇಕು !
ಮಗಳಾ ಕೊರಳಿಗೆ ಮಾಲೆಯನಿಕ್ಕುವ ಅಳಿಯನು ಬೇಕು !

**ವಿನಾ**:---ಮುಂದಿನ ಯುಗವು ಬಲು ಕೆಡು ಯುಗವು !
ಹಿಂದಿನ ಯುಗವು ಕಾಣದ ಯುಗವು,
ಇಂದಿನ ಯುಗ್ಗದೊಳು---ಇಲ್ಲವು ನಗುವು ! ||
ಮೂವರು ನಾವು........||

**ವಿರಾ**:---ಮಗಳನು ಹೆತ್ತವ ಮಾರುವೆಯಂತೆ
• ಹೆರುವಾ ಮೊದಲೇ ಬೇಡವೆ ಚಿಂತೆ ?
ಹೆತ್ತಾ ಪಾಪಕೆ ಹೊರು ಆ ಕಂತೆ
ಮೂವರು ನಾವು . . . . . . . . ||

**ವಿಶಾ**:---ಮುತ್ತಿನ ಮಗಳನು ಮನೆಯೊಳಗಿರಿಸು.
ಸುತ್ತಲು ಎತ್ತರ ಗೋಡೆಯ ಬಿಗಿಸು !
ಮೆತ್ತುತೆ ಮಣ್ಣನು---ಬಾಳ್ವೆಯ ಮುಗಿಸು !
ಮೂವರು ನಾವು . . . . . . ||

**ಘ**:--- ನಿಷ್ಠುರವು ಜಗವಿಧುವೆ !
ಕನ್ಯಾದಾನದ ಫಲವ
ಇಷ್ಟಿಷ್ಟು ಸಿಗದ ತೆರ ಗೈಯುತಿಹುದು ||
ಎಷ್ಟು ಕರೆದರು ಜನರ

ಕೊಳ್ಳರೆನ್ನಯ ಮಗಳ
ದುಷ್ಟದಿನ ಬಹೆ ಮುಂಚೆ—ಅಳಿಯನಿಲ್ಲಾ ॥ [ತೆರಳುವನು]

**ಮೂ:**—ಮೂವರು ನಾವು ವಿಶಾಖ—ವಿರಾಗ—ವಿನಾದ ॥

**ವಿನಾ:**—ವಿಶಾಖನಿವನು

**ವಿರಾ:**—ವಿರಾಗ ನಾನು

**ವಿಶಾ:**—ವಿನಾದನುಳಿದವನು ॥

(ಅದೇ ಸ್ಥಳಕ್ಕೆ ಹೇಮಂತನು ಆಸ್ತಿ ವಿಕ್ರಯದ ಸಲುವಾಗಿ ಬರುವನು)

(ರಾಗ—ಕೇದಾರ)

**ಹೇ:**— ಹೊನ್ನನೀಯುವ ನೆಲವು,
ನೀರು ತುಂಬಿದ ಕೊಳವು,
ವಿಕ್ರಯಕೆ ಅಣಿಯಿಹುದು ತ್ವರೆಯು ತ್ವರೆಯು,
ಯಾರಿಗಾದರು ಕೊಡುವೆ,
ಬೆಲೆಯು ಇಲ್ಲವು ಕಡಿಮೆ,
ಚಿನ್ನದಂಥಾ ನೆಲವು, ಮಣ್ಣಾದರೇನು ?

**ಮೂ:**—ಏನ ಕೂಗುತಲಿಹೆಯ ?

**ಹೇ:**— ಮಾರುವೆನು ಸ್ಥಿರಚರಾಸ್ತಿಯ ಬದುಕ,

**ವಿರಾ:**—ಏಕೆ ಮಾರುತಲಿಹೆಯ ?

**ಹೇ:**— ಸುಮ್ಮನಿಳಿಸಲು ಹೊರೆಯ !

**ವಿರಾ:**—ಹೊರೆಯೆ ಏನದು ಧರೆಯು !

**ಹೇ:**— ನನ್ನ ಪಾಲಿಗೆ, ಧರೆಯು !

**ವಿರಾ:**—ಧರೆಯ ಪಾಲಿಗೆ ನೀನು !

(ಕೆಳಗಿನ ಸಂಭಾಷಣೆಯಲ್ಲಿ ವಿರಾಗ ವಿಶಾಖರ ಹಾಡುಗಳು ಭೂಪದಲ್ಲೂ ಹೇಮಂತನ ಹಾಡು ಕೇದಾರದಲ್ಲೂ ಹರಿಯುವುದು.)

**ಮೂ:**—ಮೂವರು ನಾವು—ವಿಶಾಖ—ವಿರಾಗ—ವಿನಾದ

**ಹೇ:**— ಕೊಳ್ಳಿರೈ ಪುಣ್ಯಾತ್ಮರೆನ್ನ ನೆಲವ !

**ವಿರಾ:**—ನಿನ್ನ ನೆಲ ನೀನೆ ಕೊಳುವುದು ಅಯ್ಯ !

**ಹೇ:**— ಬಲು ಕಡಿಮೆ ಬೆಲೆಗೆ ಕೊಡುವೆ !

ವಿನಾ:—ನಿನ್ನ ಬೆಲೆ ಕಡಿಮೆಯೇ ಪಶುವೆ !
ಹೇ:— ನಾಳೆ ದೊರೆಯದು ಇಷ್ಟು ಅಗ್ಗ ನೆಲವು !
ವಿಶಾ:—ಇಂದೆ ಸೇರುತೆ ಬಿಡಲೊ ಅಗ್ಗ ನೆಲನ !
ಮೂ— ಮೂವರು ನಾವು—ವಿರಾಗ—ವಿಶಾಖ—ವಿನಾದ! (ತೆರಳುವರು)
ವಿರಾ:—ನಾಳೆಯ ದಿನವು !
ಬಲು ಕೆಡು—ದಿನವು !

ವಿಶಾ:—ಕೊಳ್ಳುವರಿಲ್ಲವು
ನಿನ್ನಯ ನೆಲವ

ಮೂ:—ಬದುಕಿಗೆ ನಾಳೆ
ಇಹುದೈ 'ಗೋಳೆ'

(ರಾಗ—ಭೂಪಾಳಿ)

ಹೆ: ನಾಳೆಯಾ ಕೆಡುಗಾಲ, ಬರುವ ಮುಂಚೆಯೆ ನೆಲವ
ಮಾರಿ, ಕಾಸನು ಗೈವೆ, ಎಂದರೀ ಜಗವೆನ್ನ,
ನಂಬಲಾರದೆ ನಿಂತು ಅಣಕಿಸುತಲಿಹುದು ! (ತೆರಳುವನು)

## ಅಂಕ ೨

(ಫಲ್ಗುಣನು ತನ್ನ ಮನೆಯ ಕಡೆಗೆ ಧಾವಿಸಿ ಬರುವನು)

(ರಾಗ—ಭಾಗೇಶ್ರಿ)

ಫ:— ತಾಳಲಾರೆನು ದುಃಖ
ಬಹಳ ಆಳವ ದುಃಖ
ಅದರ ಆಳಕೆ ಇಲ್ಲ—ಇಷ್ಟಿಷ್ಟು ಲೆಕ್ಕ !
ಮಗಳ ಕೊಡುವೆನು ಎಂದು
ನಾಲ್ಕು ಹಾದಿಲಿ ನಿಂದು
ಎಷ್ಟು ಕಿರುಚಿದೆನಲ್ಲ—ಕೇಳರಿಂದು !
ಬದುಕು ಉಳಿವುದು ಇಲ್ಲ
ನಾಳೆಯಾ ದಿನಕಿಲ್ಲ
ಯೋಚನೆಯೊಳಾಯ್ತೆನಗೆ ಇಂದೊಂದು ಗಲ್ಲ ||

(ರಾಗ—ಮಾಂಡ್)

ಚೈ:— ಬಹೆನಲ್ಲ, ಬಹೆನಲ್ಲ, ಬಹೆನಲ್ಲ ಯನ್ನ ನಲ್ಲ . . . ॥ ಪ ॥
ಯನ್ನ ನಲ್ಲಾ ಬಹೆನಲ್ಲಾ ರನ್ನನಲ್ಲಾ !
ಯನ್ನ ನಲ್ಲಾ ಬಹೆನಲ್ಲಾ ರನ್ನನಲ್ಲಾ ॥ ಪ ॥
ಬಹೆನು ನಾಳೆ
ಬಹಳ ಲೀಲೆ
ಜಗದ ಮೇಲೆ . . . . . . . . ॥ ಪ ॥

ಹಾಳು ಕ್ಷಯಕೆ ! ಇಂದೆ ಮುಗಿವು
ನಾಳೆ ತುಂಬ ನಗುವ ಯುಗವು
ನಾಳೆಯೆಂಬ, ಆಸೆ ಬಹಳ
ನಾಳೆ ಬರಲು, ಲೀಲೆ ಬಹಳ
ನಾಳೆ ಮುಗಿಯೆ ! ನಾಳೆ ತಿರುಗಿ !
ಬಾಳ್ವಿಗಿಲ್ಲಾ—ನಾಳೆ, ಕೊನೆಯು ॥
ಅಪ್ಪನೇತಕೆ ಇಲ್ಲಿ
ಚಿಂತೆಯಾ ಗೈವ.
ಚಿಂತೆಯೆಂಬುದು ಮುಪ್ಪು,
ಸಂತೋಷ ಬಾಳ್ವೆ,
ಸಂತೋಷ ಬಾಳ್ವೆ ॥ ಸಂತೋಷ ಬಾಳ್ವೆ ॥
ಬಹೆನಲ್ಲ, ಬಹೆನಲ್ಲ, ಬಹೆನಲ್ಲಾ ಯನ್ನನಲ್ಲಾ ॥

ಫ:— ಚೈತ್ರೆ—ನಿನ್ನಯ ತಂದೆ, ಅಳುವನೇಕೆಂದೂ,
ಹೇಳಲೇ? ಕೇಳುವೆಯ—'ಅಳಿಯನಿಲ್ಲೆಂದೂ !
ಅಳಿಯನಿಲ್ಲದ ಮಾವಗಿಲ್ಲ ಸ್ವರ್ಗವು ಎಂದು !
ಹುಡುಕಿದೆನು ಅಳಿಯನನು, ಗಲ್ಲಿಯೊಳು ನಿಂದು.

ಚೈ:— ಅಳಿಯ ಬರುವನು ತಾನೆ
ಹುಡುಕಲೇತಕೆ ನೀನೆ ?
ಚೈತ್ರೆ ಮುದ್ದಿಸಲೆಂದು—ಬಹೆನು ಇಂದು ॥
ಬಹೆನಲ್ಲ . . . . ॥ ಪ ॥

ಘ:— ಅಳಿಯ ಬರುವನೆ ಏನೆ
ಮಗಳೆ ನೀನಿಹೆ—ಜಾಣೆ
. ಹುಡುಕುತಲಿ ಬೇಸತ್ತೆ । ನೀನೆ ಇತ್ತೆ ॥

ಚೈ:— ಹಾಳು ವತ್ಸರವಿದುವೆ !
ಕಳೆದು ಹೋದಾಕ್ಷಣವೆ
ಬರುವೆನೆಂದೊರೆದಿಹನು, ಬಂದೆ ಇಹನು ॥

ಘ:— ಬಂದೆ ಇಹನೆ ?

ಚೈ:— ಆರು ಗಳಿಗೆಯು ಕಳೆಯೆ ಬರಲು ಇಹನು !
ಸ್ವಾಗತಕೆ ಹಾತೊರೆದು ನಿಂತು ಇಹೆನು !
ಗಾಳಿಯೊಳ ಬೆರೆಯುತಲಿ ಹೊರಟೆ ಇಹನು !

ಘ:— ಆರು ಗಳಿಗೆಯು ಬೇಕೆ—
ಅಳಿಯ ಬರಲು ?
ಮುಂಚೆ ಬಾರನೆ. ಅವನು
ಉಳಿಸೆ ದಿಗಿಲು !
ಕರೆಯಲೇಂ ನಾನವನ
ಬಿಗಿದು ಕೊರಲು—
ಬರಲಾರನೇಂ ಅವನು
ಚೈತ್ರೆ ಇರಲು
ಬರಲಾರನೇಂ ಈಗ ?
ಬರಲಾರನೀಗಳಿಗೆ ?
ಬರಲಾರನೀಕ್ಷಣಕೆ । ಬರಲಾರನೇ ?

ಚೈ:— ಬರಲಾರನಂತೆ, ಬರಲಾರನಂತೆ, ಬರಲಾರನಂತೆ !
ಹಾಳು ಕ್ಷಯವತ್ಸರವು ಕಳೆಯಬೇಕಂತೆ,
ಪ್ರಭವ ವತ್ಸರ ಗಾಳಿ ಬೀಸಬೇಕಂತೆ,
ತಾನಾಗ ಓಡುತಲಿ ಬರುವನಂತೆ !
ನಾನವನ ಸ್ವಾಗತವ ಗೈವೆನಂತೆ ! ಗೈವೆನಂತೆ !
ಮರೆಯೊ ಚಿಂತೆ ! ॥

(ರಾಗ --ದುರ್ಗಾ).

**ಫ:—** ಬೇಡಮ್ಮ, ನಿನ್ನನ್ನೆ
ಯಾರಿಗಾದರು ಕೊಡುವೆ,
ಅಳಿಯರಾಯನ ಮುಖವ ಬೇಗ ಕಾಂಬೆ ||
ಪುಣ್ಯವಿಲ್ಲವು ನಾಳೆ,
ದಾನಮಾಡಿದರೆನಗೆ,

**ಚೈ:—** ದಾನವೇತಕೆ ಅಪ್ಪ, ಚೈತ್ರೆಯನ್ನು . .
ತಾನೆ ಬಯಸುವರಿಲ್ಲ ಕನ್ಯೆಯನ್ನು ?

**ಫ:—** ಫಲುಗುಣನ ಮಗಳನ್ನು
ಯಾರು ಬಯಸಿವರೇನು ?
ದಾನದಧಿಕಾರವದು ತಂದೆಗಿಹುದು !
ನಾಳೆ ಮುಂಚೆಯೆ ಅದನು ಮುಗಿಸಲಿಹುದು !

(ಅಲ್ಲಿಗೆ ನವಗುರುವಿನ ಪ್ರವೇಶ)

**ನ:—** ನೀಲವಾಗಿಹುದು ಆಕಾಶ
ಮುಗಿಲ ಕುಣಿತವು ಮಿಗುವ ತೋಷ !
ಬರಿದು ಆಗುವುದು ಈ ದೇಶ
ಜಗವ ಜಡತೆಯ ಫಲವೆ ಕ್ಲೇಶ ||

(ರಾಗ --ಶಂಕರಾ).

**ಫ:—** ಹೇ ! ಗುರುವೆ, ಹೇ ಗುರುವೆ, ಗುರುವೆ !
ಮನದೊಳಗೆ ಬಲುವಾಗಿ—ಮರುಗುತಿರುವೆ ! ಇರುವೆ !

**ನ:—** ಯಾವ ಕನ್ಯೆಯು ಇವಳು ? ಪೇಳು ಗೆಳೆಯ ?

**ಫ:—** ಅಳಿಯನಿಲ್ಲದ ಯನ್ನ ಮಗಳು ದೊರೆಯೆ.

**ನ:—** ಗೈಯಲಿಲ್ಲವೆ, ದಾನ ಇನ್ನು ಅವಳ ?

**ಫ:—** ದೊರೆಯಲಿಲ್ಲವು ಅಳಿಯ, ಎನ್ನ ಹವಳ . .

**ನ:—** ಬೇಗ ಗೈಯಲು ಬೇಕು ದಾನವಿದನು—
ಉಳಿದಿಹುದು ಬರಿ ನಾಲ್ಕು ಗಳಿಗೆಯಿನ್ನು,
ನಾಳೆದಿನ ಗೈಯುವೊಡೆ ಪುಣ್ಯವೆಲ್ಲಿ ?

ಇಂದಿನದೆ ಕೊನೆಯದಿನ, ನಾಳೆಯಿಲ್ಲ !
ಅಳಿಯನಿಲ್ಲದ ಮಾವ !
ತಂಗಿಯಿಲ್ಲದ ಭಾವ !
ದೇಹವಿಲ್ಲದ ಜೀವ—ವ್ಯರ್ಥವಲ್ಲ, ವ್ಯರ್ಥವಲ್ಲ. (ತೆರಳುವನು)

ಫು:— .......ಅಳಿಯನಿಲ್ಲಾ, ಅಳಿಯನಿಲ್ಲಾ
ಎಲ್ಲ ಜನರೇ ಕೇಳಿರನ್ನ,
ಮಗಳು ಇಹಳು ದಿವ್ಯ ಚಿನ್ನ,
ಬೇಗ ಬಂದು ಕೇಳಿ ದಾನ,
ನಾಳೆ ಇರಿಸೆ ಅಪಮಾನ ॥ (ತೆರಳುವನು)

(ರಾಗ—ಪಾಂಡ್)

ಚಿತ್ರೆ: ಬಹೆನಲ್ಲ ಬಹೆನಲ್ಲಾ, ಬಹೆನಲ್ಲಾ
ಎನ್ನನಲ್ಲಾ ॥
ಎನ್ನನಲ್ಲಾ ಬಹೆನಲ್ಲಾ ದಿನವಿಲ್ಲಾ ।
ಎನ್ನನಲ್ಲಾ ಬಹೆನಲ್ಲಾ ದಿನವಿಲ್ಲಾ ॥ ಪ ॥ (ತೆರಳುವಳು)
(ಹೇಮಂತನು ಅಲ್ಲಿಗೆ ಬರುವನು)

(ರಾಗ—ಕರ್ನಾಟಕಿ ಭೈರವಿ)

ಹೇ:— ಕೊಳ್ಳುವರಾರೋ, ಯನ್ನಾಸ್ತಿಯ
ಕೇಳಿದೆ, ಹೇಳಿದೆ ಗೋಳಿಟ್ಟು ಕೂಗಿದೆ,
ನಾಳೆಯೊಳಗೆ ಬೆಲೆಯು ಆರುವ ಆಸ್ತಿಯ !
ನಾಳೆಯ ಮುನ್ನವೆ ಆದಷ್ಟು ಹೊನ್ನನು ।
ಗಳಿಸುವೆನೆಂದರೆ ಕೊಳ್ಳುವವರಿಲ್ಲಾ.
ಮುಂದಿನ ವರುಷಕೆ ಬದುಕಲು ನಿಲುವಿಲ್ಲ,
ಇಂದಿನ ವರುಷವು ಕಳೆಯುವುದಲ್ಲ ॥

(ಹೇಮಂತನ ಮಡದಿಯಾದ ನಿದ್ರಾದೇವಿಯು ಬರುವಳು)

(ರಾಗ—ಸಾರಂಗ)

ನಿದ್ರಾ:—ನಾಥನ ಕಾಣದೆ, ನೊಂದಿಹೆನೋ
ಮಮ ನಾಥನ ಕಾಣದೆ ನೊಂದಿಹೆನೋ
ನಾಥಾ, ನಾಥಾ ॥

ಈ ಯುಗದ ಅಂತ್ಯವು
ಮುಂದಿನ ಆದಿಯು
ಮುಂದಿನ ಆದಿಯು
ಇಂದಿನ ಕೊನೆಯು
ಇಂದಿಲ್ಲದಿಹೆ ಸುಖ ನಾಳೆಗೆ ಒಲ್ಲದು
ಇಂದರಳಿದ ಹೂ, ನಾಳೆಗೆ ಸಾವುದು
ನಾಳೆಯ ಮುಂಚೆಯೆ ಎಲೆ ಪ್ರಿಯನಾಥಾ.
ಬಾಳುವ. ಪುಣ್ಯದ ಬಾಳ್ವೆಯ ದಾತಾ ॥

(ನಾಥನನ್ನು ಕಂಡು)

ಕಾಣುವ ನಾಥನು........ನೊಂದಿಹನೋ!

ಹೇ:— ನಾಥೆಯೆ, ಹೇಮಂತ ಬಂದಿಹನೋ
ತನ್ನ ಆಸ್ತಿಯ ಮಾರದೆ ನೊಂದಿಹನೋ.
ಈ ಯುಗದ ಅಂತ್ಯವು
ಮುಂದಿನ ಆದಿಯು.
ಆಸ್ತಿಯ ಮಾರಲು
ಕಾಣೆನು ಹಾದಿಯು.
ಬೇಗನೆ ಆದಷ್ಟು ಕಾಂಚನ ಕೂಡುವ
ಎಂದೊಡೆ ಜನರಿಲ್ಲ, ತೋಟವ ಕೊಳ್ಳುವ
ನಾಳೆಯು ದುರ್ದಿನ—ಬರಲಿಹೆ ಮೊದಲೇ
ಮಾರಲು ಬೇಕಲ್ಲ, ಬೆಲೆ ತಗ್ಗುವುದೆಲೆ !

ನಿ:— ನಾಥಾ, ನಾಥಾ, ನಾ....ಥಾ ।
ಹೇ:— ನಾಥೆ, ನಾ....ಥೆ, ನಾ....ಥೆ ।

[ಅಲ್ಲಿಗೆ ನವಗುರುವು ಬರುವನು]

ನ:— ನೀಲವಾಗಿಹುದು ಆಕಾಶ
ಮುಗಿಲ ಕುಣಿತವು ಮಿಗುವ ತೋಷ
ಬರಿದು ಆಗುವುದು ಈ ದೇಶ
ಜಗದ ಜಡತೆಯ ಫಲವೆ ಕ್ಲೇಶ ॥

(ರಾಗ --ಬೇಹಾಗ್)

ಹೇ:— ಹೇ—ಗುರುವೆ, ಹೇ ಗುರುವೆ....ಹೇ....ಗುರುವೆ
ಹಿರಿ ಹಿರಿ ಗುರುವೆ, ಹೆಗ್ಗುರುವೇ! ಗುರುಗುರು ಗುರುವೆ ಗುಗ್ಗುರುವೆ!

ನ:— ಮಾರಿದೆಯ ನೀನಿಂದು ನಿನ್ನ ಆಸ್ತಿ ?
ಹೇ:— ದೊರಕಲಿಲ್ಲವು ನೋಡಿ ಒಳ್ಳೆ ದೋಸ್ತಿ.
ನ:— ನಾಳೆ ಇರಿಸಲು ಅದಕೆ ಬೆಲೆಯೆ ನಾಸ್ತಿ.
ಹೇ:— ಬಯಸುತಿರುವೆನು ನಾನು ಬೆಲೆಯು ಜಾಸ್ತಿ ||
ನ:— ಎಷ್ಟಕಾದರು ಅವನು ಕೊಟ್ಟುಬಿಡೆಲೊ,
ನಾಳೆಯೆಂಬುದು ಜಗದಿ ನಿಜವೆ ಇಲ್ಲೋ!
ದಾನವಾದರು ದಾನ ಕೊಟ್ಟುಬಿಡೆಲೊ,
ಪುಣ್ಯವನು ಆದಷ್ಟು ಕಟ್ಟಿಕೊಳೆಲೊ ||
ನಾಳೆಯೆಂದರೆ ಸಾವು
ಇಂದಿನದು ಜೀವ.
ಇಂದು ದೊರಕಿದ ಪುಣ್ಯ
ಪರದ ಖರ್ಚಿನ ನಾಣ್ಯ ||
ನೀಲವಾಗಿಹುದು ಆಕಾಶ
ಮುಗಿಲ ಕುಣಿತವು ಮಿಗುವ ತೋಷ
ಬರಿದು ಆಗುವುದು ಈ ದೇಶ
ಜಗದ ಜಡತೆಯ ಫಲವೆ ಕ್ಲೇಶ || (ತೆರಳುವನು)

ಹೇ:— ಕೇಳೇ ಮಡದೀರತ್ನ—ಗುರುವಿನುಪದೇಶಾ !
ನೀಲವಾಗಿಹುದು ಆಕಾಶಾ,
ಮೇಲೆ ಸ್ವರ್ಗದಿ ಬಹಳ ತೋಷ,
ಭೂಮಿಯೊಳು ಎಲ್ಲ ಬರಿ ಮೋಸ—
ಅದರಿಂದ ಫಲಿಸುವುದು ಕ್ಲೇಶಾ ||
ಇದುವೆ ಅರ್ಥವು ಗುರುವಿನುಪದೇಶಾ ! ||
ಯಾರಾದರೂ ಬನ್ನಿ, ಬನ್ನಿ ಜವದೀ
ಈಗಲೇ ಮಾರುವೆನು ನಿಂತ ನೆಲದಿ

ಬೆಲೆಯ ಆಸೆಯು ಕಾಕು
ಬರಿಯ ಪುಣ್ಯವು ಸಾಕು !
ಕೊಂಬವರು ತ್ವರೆ ಬೇಕು !
ಕರೆ ಕರೆದು ಕೂಗುತಿಹೆ—ದಿಕ್ಕು ನಾಲ್ಕು ! (ತೆರುವನು)

## ಅಂಕ ೩

(ಹಾದಿಯಲ್ಲಿ-ಬರುತ್ತಿರುವ-ವಿಶಾಖ-ವಿರಾಗ-ವಿನಾದರು)

(ರಾಗ--ಭೂಪ)

**ಮೂ:**--ಮೂರೇ ಮೂವರು—ವಿಶಾಖ—ವಿರಾಗ—ವಿನಾದಾ ||
**ವಿನಾ:**--ಯುಗವಿದು ಈಗ,
ಬದಲಿಸಲಿಹುದು,
ಮುಂದಿನ ಯುಗವು
ಬಲು ಕೆಡುಕಿನದು,
ಬಾಳಲು ಎಡೆಯೇ
ಇಲ್ಲದೆ ಇಹುದು,

(ನಲ್ಲನನ್ನು ಕೂಗುತ್ತ ಚೈತ್ರೆಯು ಬರುವಳು).

**ಚೈ:**— ಬಾರೆ, ಬಾರೆ, ಬಾ....ರೆ ||
ಸ್ವಾಗತ ಬಯಸುವೆನು ಬಾ....ರೆ ||
ಫಾಲ್ಗುಣವು ಕಳೆಯುತಿದೆ !
ಈ ಯುಗವು ಮುಣುಗುತಿದೆ,
ನವಯುಗವು ಕರೆಯುತಿದೆ || ಬಾ....ರೆ ! ಬಾ....ರೆ ||
ಬಾರೆ, ಬಾರೆ ! ಬಾರೆನ್ನ ನಲ್ಲಾ !
ವಸಂತ ....ಬಾ....ರೇ !. ಬಾ....ರೇ ||
ಕ್ಷಯವರ್ಷ ಕ್ಷಯಿಸುತಿದೆ
ಹೃದಯದೊಳ್ ಆಸೆಯಿದೆ
ಬಾಳ್ವಿಯ ಬಯಕೆ ಇದೆ

ಬಾ....ರೆ । ಬಾ....ರೇ । ಬಾ....ರೇ ॥
ವಸಂತ....ಬಾ....ರೇ । ಬಾ ...ರೇ ॥

**ಮೂ:**--ಯಾರಿಲೆ ನೀ ರಮಣಿ?
ಕೇಳ್ವರು ಮೂವರು—ವಿಶಾಖ ವಿರಾಗ ವಿನಾದರು

**ವಿರಾ:**—ವಿಶಾಖನಿವನು
**ವಿನಾ:**—ವಿನೋದ ನಾನೂ
**ವಿಶಾ:**—ವಿರಾಗನುಳಿದವನು ॥
**ಚೈ:** -- ಬಾ . . ರೆ, ಬಾ . . ರ, ಬಾ . ರೇ
**ವಿರಾ:**—ಯುಗವಿದು ಕಳಚಲು ಕೂಗುವರಾರ?
**ವಿನಾ.** —ನಗುವನು ಹೊದ್ದಿದ ನಿನ್ನಯ ಮೋರೆ
**ವಿಶಾ.** --ಜವಮೊಳು ಪೇಳಲೆ ನೀನಾರೆ ?
**ಚೈ:** -- ಬಾ . . ರೆ, ಬಾ . . ರೆ, ಬಾ . ರೇ
**ವಿರಾ:** --ಕರೆಯುವ ಬಂದವಡು ನಾವು ಇರಲು
**ವಿನಾ:**—ಈಗಲೆ ಈ ಯುಗವು ಮುಗಿಯುತಿರಲು
**ವಿಶಾ:**- ಕಿರುಚುವೆಯ ನೀನ್ಯಾಕೆ ಬಿಗಿದು ಕೊರಲು ?
**ವಿರಾ:**- –ನಗುವಿದೇನು ?
**ವಿನಾ.**—ಆಸೆಯೇನು ?
**ವಿಶಾ:**—ಕರೆಯಿದೇನು !
**ಚೈ:**- - ಬಾ ...ರೆ, ಬಾ....ರೆ, ಬಾ....ರೇ ॥
ಸ್ವಾಗತವ ಒಯುನುವಳು ತವ ನೀ....ರೆ ॥

**ವಿರಾ.** - ಬಹ ಯುಗವು ಕೆಡುಯುಗವು ।
ನಗುವ ಯುಗವೇ ಅಲ್ಲ ॥

**ವಿನಾ:**— ಇಹಯುಗವು ಸರಿಯುತಿಹ ।
ಇನ್ನು ನೋಡಲು ಇಲ್ಲ ॥

**ವಿಶಾ:**—ಬಾರೆ! ಸೇರೆಮ್ಮಗಳ ।
ನಾಳೆಯೆಂಬುದೆ ಇಲ್ಲ
॥ ಬಾ....ರೆ ಬಾ....ರೆ ॥

**ಮೂ**:—ಮೂವರು ನಾವು ವಿಶಾಖ—ವಿರಾಗ—ವಿನಾದ ||

**ಚೈ**:— ಮೂವರೆ ನೀವು !
ಸಾವಿನ ತಮ್ಮರು ! ವಿಶಾಖ—ವಿರಾಗ—ವಿನಾದರು |
ಬಾಳ್ವೆಯು ಇಲ್ಲವು ನಿಮಗಿನ್ನು
ಬಾಳುವ ಜೀವರು ನಾವಿನ್ನು
ಬಾಳ್ವೆಯ ಮರೆವರು ಸಾಯುವರು
ಬಾಳ್ವೆಯ ನೆನೆವರು ಬದುಕುವರು ||
ಬಾ....ರೆ, ಬಾ....ರೆ, ಬಾ....ರೇ ||

(ರಾಗ—ವಸಂತ)

**ವ**:— ಬರುತಲೆ ಇಹೆನೆ ಚಿಂತ್ರಾಂಗಿ (ತೆರೆಯೊಳಗಿಂದ)
ಸಜ್ಜೆಯ ಬಿಟ್ಟೆನು, ಶುಭಾಂಗಿ
ನಗುವನು ತೊಡುತಿಹೆ ಶೋಭಾಂಗಿ ! ||

**ಚೈ**:— (ಆನಂದದಿಂದ ಉನ್ಮತ್ತಳಾಗಿ) ಬಾ....ಬಾ.... (ತೆರಳುವಳು)

(ಹೇಮಂತ ಫಲ್ಗುಣರು ಜತೆಯಲ್ಲಿ ಬರುವರು)

(ರಾಗ—ಪೀಲು)

**ಫ**:— ವತ್ಸರ ಕಳಚಲು, ಗಳಿಗೆಯು ಉಳಿದಿದೆ
ಅಳಿಯನ ಪಡೆಯುವೆನಿನ್ನೆಂತು ?
ಕನ್ಯಾದಾನದ ಫಲವೆಂತು !
ಪುಣ್ಯದ ಗೈಯ್ಮೆಗೆ ಎಡೆಯೆಂತು ?

**ಮೂ**:—ಮೂವರು ನಾವು—ವಿಶಾಖ—ವಿನಾದ—ವಿರಾಗ |

**ವಿನಾ**:—ವಿಶಾಖನಿವನು |

**ವಿರಾ**:—ವಿರಾಗ ನಾನು |

**ವಿಶಾ**:—ವಿನಾದನುಳಿದವನು |

**ಫ**:— ಮೂವರು ಬೇಡ!
ಒಬ್ಬನೆ ಸಾಕು!
ಅಳಿಯನು ಬೇಕಿಹುದು !

**ವಿರಾ**:—ಬಾಳ್ವೆಯು ಮುಂದೆ
ಇಲ್ಲದ ಮೇಲೆ
ಮದುವೆಯು ನಮಗೇಕೆ ? ।

**ವಿನಾ**:—ನಾಳೆಯ ಯುಗವು
ಬರುವಾ ಮುನ್ನವೆ
ಹೊಡೆಯುವೆ ನೀ ಕೇಕೆ !

**ವಿಶಾ**:—ಮಗಳನು ಕೊಲ್ಲದೆ
ಅಳಿಯನ ಹುಡುಕುವೆ
ಮರುಳನೆ ನೀ ಧೋಕೆ ?

**ಫ**:— ಅಳಿಯನ ಹುಡುಕುತೆ, ಗಳಿಗೆಯು ಸರಿವುದು
ಕಾಣೆನು ದಾರಿಯನು.

**ಹೇ**:— ಆಸ್ತಿಯ ಮಾರಲು, ಆಯುಷ್ಯ ಸರಿಯಿತು
ಕಾಣೆನು ಖಾತ್ರಿಯನು,

**ಫ**:— ಹೇಮಂ....ತ ।

**ಹೇ**:— ಫಲುಗು....ಣ ।

**ಇಬ್ಬರು**:—ಗುರುಗಳ ಕರೆವ
ಗುರುಗಳ ಕರೆವ
ಎಲ್ಲವ ಒರೆವ

[ಅಲ್ಲಿಗೆ ನವಗುರುವಿನ ಪ್ರವೇಶ]

**ನ**:— ನೀಲವಾಗಿಹುದು ಆಕಾಶ
ಮುಗಿಲ ಕುಣಿತವು ಮಿಗುವ ತೋಷ
ಬರಿದು ಆಗುವುದು ಈ ದೇಶ
ಜಗದ ಜಡತೆಯ ಫಲವೆ ಕ್ಲೇಶ ॥

(ರಾಗ-ಬೆಹಾಗ)

**ಫ**:— ಏ ಗುರುವೆ, ಹೇ ಗುರುವೆ, ಹೇ ಗುರುವೆ ॥
ಪಾದಕೆರಗುವೆ
ಪ್ರಾಣ ನೀಗುವೆ.

ಹೇ.     ಏ ಗುರುವೆ, ಏ ಗುರುವೆ, ಹೇ ಗುರುವೇ ||
ಪ್ರಾಣ ಸೀಗುವೆ
ಪಾವಕೆರಗುವೆ !

ನ:---  ದಾನಗೈದೆಯಾ ?
ಫ: —  ಅಳಿಯಸಿಲ್ಲವು.
ಮಾನ ಕಾಯಲು
ಬೇಕು ಗುರುಗಳು.

ನ.---  ಮಾರಲಿಲ್ಲವೆ ?
ಹೇ: —  ಕೊಂಬರಿಲ್ಲವು.
ಮಾನ ಕಾಯಲು
ಬೇಕು ಗುರುಗಳು.

(ರಾಗ --ಅಧಾಣ)

ಫ:—  ಯುಗವು ಕಳಚುವ ಮುನ್ನ
ಮಗಳ ಕೊಳ್ಳುತ ಸೀವು,
ದಾನದಾ ಫಲವದನು--ಕೊಡಿಸಲಿಹುದು !
ಹೇ ಗುರುರಾಯ !

ಹೇ: -  ಬೆಲೆಯು ತಗ್ಗುವ ಮೊದಲು
ಆಸ್ತಿದಾನವ ಪಿಡಿದು,
ಪುಣ್ಯದಾ ಫಲವದನು ಬಡಿಸಲಿಹುದು ||
ಹೇ ಗುರುರಾಯ ||

ಫ:---  ಅಗೊ--ಯುಗವು ಕಳಚುತಿದೆ !
ಮರ್ದನವು ನೋಡುತಿದೆ !

ನ:-—  ಎನಗೆ ಬೇಡವಿದು ದಾನಾ,
ನಾಳೆ ತಗ್ಗುವುದು ಪರಮಾನಾ,
ನಿಮ್ಮ ಉಳಿಸಲು ಪೋಗೆ ನಾನು,
ಪಾಪದಾ ಕೂಪದಲಿ ಮುಣುಗೇನು !

**ಹೇ:** — ಗುರುರಾಯ ಹೇ, ಗುರುರಾಯ ।
ಕಾಯದಿರೆ—ಬಿಡಲಿಹೆವು ಇಲ್ಲಿ ಕಾಯ !

**ಘ:**— ಗುರುರಾಯ ಹೇ । ಗುರುರಾಯ ।
ಪಾಪವನು ತೊಳೆಯುವರೆ! ಇಲ್ಲುಪಾಯ ॥ ನಮಗಿಲ್ಲುಪಾಯ !

**ಹೇ:**— ಬಿಡೆಲೊ ಕಾಯ
ಇಲ್ಲಿ ರಾಯ ! ॥

**ಘ:**— ಬಿಡುವೆ ನಾನೂ
ಪ್ರಾಣವನ್ನು ॥

**ನ:**— ತನು ತಡೆಯಿರಲವೊ ಪ್ರಾಣ !
ಸ್ನಾನ ಗೈಯುತೆ ಬರುವೆ ನಿಧಾನ....
ಪಿಡಿಯುವೆನು ಮಗಳನ್ನೆ ದಾನ,
ನಿನ್ನಾಸ್ತಿ ಅದಕಾಯ್ತು ಕಾಂಚಾನಾ ॥ (ತೆರಳುವನು)

**ಹೇ:**— ಉಳಿದೆವ್ಯೆ ನಾವು !

**ಘ:**— ಉಳಿದೆವ್ಯೆ ನಾವು ! ಕರೆಯುವೆನು ಮಗಳನ್ನು ॥

(ಕ್ಷಯವತ್ಸರವು ಕಳೆಚಿ- ಪ್ರಭವದ ಯುಗಾದಿಯು ಬಂದಿದೆ. ನಲಿವಿಂದ ಚೈತ್ರ ವಸಂತರು ಕೈಹಿಡಿದು ಬರುವರು.)

(ರಾಗ—ಪೀಲು)

**ಚೈತ್ರ-ವಸಂತರು.**—ಆನಂದ ರಾಜ್ಯವಿ . . ನ್ನು ।
ಆಹ್ಲಾದ ರಾಜ್ಯವಿ . . ನ್ನೂ ॥

**ವ:**— ನವ ಯು . . . ಗ ।
ಬಂ . . . ದಿರೆ !
ಚೈತ್ರೆಯೆ ಚಂದಿರೆ ! !

**ಚೈ:**— ಗತ ಕಾಲ
ಸಂದಿರೆ
ವಸಂತ ಬಂಧುರೆ ॥
ಆನಂದ ರಾಜ್ಯವಿನ್ನು . -

(ನವಗುರುವು ಬರುವನು)

(ರಾಗ—ಅಠಾಣ)

ನ:— ಎಲ್ಲಿ ಕರೆಯಿಸು ಮಗಳ, ಮಾವ
ನಿನ್ನುಳಿಸೆ ಪಿಡಿಯುವೆನು ದಾನ.
ಎಲ್ಲಿ ದಾನವ ಕೊಡೆಲೊ ಭೂಮಿ
ನಿನ್ನುಳಿಸೆ ಆಗುವೆನು ಶಾಮಿ !

ವ:— ಮಗಳಿಹಳು ಎನ್ನೊಡನೆ ಸ್ವಾಮಿ,
ತಂದೆಯಿಂ ನನಗುಂಟು ಭೂಮಿ !

ನ:— ಹೇಮಂತ, ಫಲುಗುಣ
ಏನು ಫಾಸಿ!
ಮಗನೇನು—ಮಗಳೇನು !
ಏ ಭಿಕನಾಸಿ !

ನ:— ಹಳೆಯುಗದೊಳಗಿಷ್ಟು ಅನ್ಯಾಯವೆ !

ವ:— ಹೊಸಯುಗ ಬಂದಿದೆ, ಸಂತೋಷವೇ ?

ಚೈ:— ಮೋರೆ ತಗ್ಗಿಪ ಜನಕೆ ಬಾಳ್ವೆಯಿಲ್ಲ.
ಮುಂದಿನಾ ನವಜನಕೆ ಬಾಳ್ವೆ ಎಲ್ಲ

**ಆಸೆ ಬಿಟ್ಟಿಹ ಜನಕೆ ನರಕವಿಹುದು**
**ಆಸೆ ಉಳಿಸಿಹ ಜನರು ಬದುಕಬಹುದು !**

**ಚೈತ್ರ-ವಸಂತರು:**—ಆನಂದ ರಾಜ್ಯವಿನ್ನು
ಆಹ್ಲಾದ ರಾಜ್ಯವಿನ್ನು
ಆ . . . . . . . . ನಂದ
ಆ . . . . . . . . ಹ್ಲಾದ

[ಪ್ರವೇಶ—ಅವಧೂತ]

(ರಾಗ—ಭೈರವಿ)

**ಅವಧೂತ.**— ನೀಲವಾಗಿರಲು ಆಕಾಶ
ಮುಗಿಲು ತೊಟ್ಟಿತು ಹಲವು ವೇಷ
ಮನದಿ ತುಂಬಿರಲು ಆವೇಶ
ಅಳಿವೆಂಬುದಿಲ್ಲ ಉಲ್ಲಾಸ !

# ಪಾತ್ರ ವರ್ಗ

**ಹಿಮ್ಮೇಳ:—** ಕಥಾನಕದ ಬೆಳವಣಿಗೆಗೆ ಪೋಷಕರಾದ ಹಾಡುಗಾರರು —ನೇಪಥ್ಯದೊಳಗಿಂದಲೇ ಹಾಡುವರು.

**ಸತ್ಯವಾನ:—** ದ್ಯುಮತ್ಸೇನ ದೊರೆಯ ಮಗ. ರಾಜ್ಯವಿಲ್ಲದೆ ತಂದೆಯೊಡನೆ ಅರಣ್ಯವಾಸಿಯಾದವ.

**ಅಶ್ವಪತಿ:—** ಸಾವಿತ್ರಿಯ ತಂದೆ.

**ಮಂತ್ರಿ:—** ಅಶ್ವಪತಿಯ ಮಂತ್ರಿ.

**ಸಾವಿತ್ರಿ:—** ಅಶ್ವಪತಿಯ ಮಗಳು, ಸತ್ಯವಾನನ ಕೈಹಿಡಿದ ಕನ್ಯೆ

**ನಾರದ:—** ಸತ್ಯವಾನನ ಕುರಿತಾದ ಭವಿಷ್ಯವನ್ನು ಹೇಳುವ ಋಷಿ.

**ಯಮ:—** ಎಲ್ಲರಿಗೂ ಸಾವು ತರುವ ದೇವ.

ವಟು, ಸಖಿಯರು ಇತ್ಯಾದಿ.



## ದೃಶ್ಯ ೧.

[ವಟುವೊಬ್ಬನ ಜತೆಯಲ್ಲಿ ಸತ್ಯವಾನನು ಆಶ್ರಮದ ಬಳಿಯ ವನದಲ್ಲಿ ಹೂವನ್ನು ಆಯುತ್ತಿರುವನು.]

(ರಾಗ—ಕಾಫಿ)

**ಸತ್ಯವಾನ:**— ಯೌವನದ ತಂಗಾಳಿ
ಚೆಲುವಿನಲಿ ಬೀಸುತಿರೆ,
ಬಾನು ನೀಲಿಮೆಯಾಂತು
ಕಡು ಹರುಷ ಸೂಸುತಿರೆ,
ತಿರೆಯು ಸೊಗವದು ತಾನು
ಹೊನಲಾಗಿ ಹರಿಯುತಿರೆ,
ಆವುದೋ, ಆವುದೋ, ಆ ಭಾ ವ....
ಕತ್ತಲನು ತುಂಬತಿರೆ
ಆವುದೋ, ಆವುದೋ....

**ಹಿಮ್ಮೇಳ:**— ಆಸೆಯದೋ ತಂದಿಹುದೋ,
ಈ ವನಕೆ, ಆ ಬಯಕೆ.
ಆವುದೋ ಆವುದೋ....

[ಅಶ್ವಪತಿ ದೊರೆಯು ಮಂತ್ರಿಯೂ ಸಾವಿತ್ರಿಯ ಜತೆಯಲ್ಲಿ ಪ್ರವೇಶಿಸುವನು.]

(ರಾಗ-ಖಂಬಾವತಿ)

**ಮಂತ್ರಿ:**— ಆತನೇ, ಆತನೇ.
ಆತನೇ ನೀ ನೋಡು:
ನಿನ್ನ ಕನಸಿನ ಬೇಟಿ,
ನಿನ್ನ ಭಾವದ ಊಟಿ,
ಆತನೇ ಆತನೇ—ನೀನೋಡು.
ಸತ್ಯವಾನನು ಅವನೆ
ಕಾನನದಿ ನಿಂದವನೆ!
ವಟುಗಳಲಿ ಚಂದಿರನೆ

ನೀನರಸಿ ಬಂದವನೆ.
ಆತನೇ ಆತನೇ ಆತನೇ....

**ಸತ್ಯವಾನ**:— ಆವುದೋ ಆವುದೋ ಆಭಾವಾ
ಕತ್ತಲನು ತುಂಬಿರಲು....

(ಸಾವಿತ್ರಿಯನ್ನು ನೋಡುತ್ತಲಿ)

ಆವುದೋ ಆವುದೋ
ಚಂದಿರನ ತಂಬೆಲರು
ನನ್ನೆದೆಯ ಸೆಳೆಯುತಿದೆ
ನನ್ನೆದೆಯ ತುಂಬುತಿದೆ
ನನ್ನಿಯನು ಬಯಸುತಿದೆ . . !
ಆವುದೋ ಆವುದೋ ಆಭಾವಾ
ಸ್ವಭಾವಾ . ಅನುಭಾವವಾಗುತಿದೆ.

**ವಟು**:— ತಾವಾರು ?
ತಾವೇನು ಬಂದವರು ?
ಪರ್ಣಶಾಲೆಗೆ ಬಂದು
ನಮ್ಮ ಆದರ ಕೊಂಡು
ಹೆರುಷಗೊಳಿಸಲು ಬಹುದು—ತಾವಾರು ?

**ಮಂತ್ರಿ**:— ದ್ಯುಮತ್ಸೇನ ದೊರೆರಾಯ
ಕಾನನದಿ ತಪವೆಸಗೆ
ಬಂದು ಸೇರಿಹ ತಾಣ
ಕಾಣ ಬಂದೆವು ಅರಸಿ.

**ವಟು**:— ದೂರ ಪಯಣವೆ ಏನು ?
ಇದುವೆ, ಆತನ ತಾಣ
ಮುಂದೆ ತಮ್ಮಯ ಗಮನ....?

**ಮಂತ್ರಿ:—** ಮುಂದೆ ಇಲ್ಲವು ಗಮನ.
ಬಂದೆವಿಲ್ಲಿಗೆ ನಾವು
ಹಳೆಯ ಕಾಲದ ನೆನಹ
ನೆನವುಗೊಳಿಸಲಿಕೆಂದು

ಅಶ್ವಪತಿ ದೊರೆ ಕನ್ಯೆ
ಬಳಿನಿಂದ ಈ....ಕುವರಿ
ಪರ್ಣಶಾಲೆಯ ಚೆಲುವ
ಕಾಣಬಂದಳು ಅಮರಿ

ತಾವಾರು ?

**ಸತ್ಯವಾನ:—** ನಾ ವಟುವು (ರಾಗ—ಕೇದಾರ)

**ಸಾವಿತ್ರಿ:—** ಮನವೇಕೊ ತನ್ನ ತಾನು ಮರೆತಂತೆ,
ತನುವೇಕ್ಕೊ ಇವನಲ್ಲಿ ಬೆರತಂತೆ,
ಅಸುವೇಕೊ ನೆಲೆಯನ್ನೆ ತೊರೆದಂತೆ
ಆಗುತಿದೆ....ಸಾಗುತಿದೆ....ತೂಗುತಿದೆ....

**ಸತ್ಯವಾನ:—** ಘನವೇನು ಈ ಜೀವ
ಸೆರೆಯಲ್ಲಿ ಸಿಕ್ಕಂತೆ !
ಹಸಿವೇಕೋ ಮನದಲ್ಲಿ
ಬಲುವಾಗಿ ಮಿಕ್ಕಂತೆ !
ಈ ಚೆಲುವೇನೊ ಬಲೆಯನ್ನೆ ಎಸೆದಂತೆ
ಆಗುತಿದೆ, ಬಾಗುತಿದೇ
ತೂ........ಗುತಿದೇ

(ವಟು ಸತ್ಯವಾನನ್ನು ತೋರಿಸುತ್ತ)

**ವಟು:—** ವಟುವಲ್ಲ ವಟುವಲ್ಲ
ರಾಜಕುಮಾರ
ನೀವರಸಿ ಬಂದಿರ್ಪ
ನವ ಸೌಕುಮಾರಾ

**ಸಾವಿತ್ರಿ:—** ಉಕ್ಕುತಿದೆ ...ಸೊಕ್ಕುತಿದೆ....
ಮನದಾ...........ಸೇ
ಚೆಲ್ಲುತಿದೆ, ಗೆಲ್ಲುತಿದೆ ಹಿರಿಯಾಸೆ.

## ದೃಶ್ಯ. ೨.

[ಅರಮನೆಯಲ್ಲಿ ವಿವಾಹಕ್ಕೆ ಉತ್ಸಾಹಿತಳಾದ ಸಾವಿತ್ರಿಯು ಸಖಿಯೊಡನೆ]

(ರಾಗ--ಬಿಹಾಗು)

**ಹಿಮ್ಮೇಳ:—** ವಸಂತವು ಸಂತಸವು ।
ಮನಕಾಮೋದವು
ಜನಕಾಮೋದವು
ಜಗಕಾನಂದವು, ಚಂದವು
ಸಂತಸವು । ವಸಂತವು ಸಂತಸವು ।

**ಸಾವಿತ್ರಿ:—** ಭಾರೀ ಸೊಗಸಿಗೆ

**ಸಖಿ:—** ಭಾವೀ ಕನಸಿಗೆ

**ಸಾವಿತ್ರಿ:—** ಜನ ಜೀವಕೆ ನಗೆ

**ಸಖಿ:—** ಮನದಾಸೆಗೆ ಮಿಗೆ

**ಸಾವಿತ್ರಿ:—** ತರುತಿಹ ಉತ್ಸಹವು

**ಸಖಿ:....** ವರನಾಸೆಗೆ ವಧುವು

**ಹಿಮ್ಮೇಳ:—** ಸಂತಸವು । ವಸಂತವು ಸಂತಸವು

## ದೃಶ್ಯ. ೩.

[ರಾಗ--ಕುಂತುಲ ವರಾಳಿ]

**ಹಿಮ್ಮೇಳ:—** ಮಧುಮಾಸವು ಚೆಲುಹಾಸವು
ಭೂದೇವಿಯ ಮುಖದಲ್ಲೇ, ಮನದಲ್ಲೇ
ಜಗಜೀವವು, ಮಿಗೆ ಭಾವವು
ಪರಿಸ್ಫುರಿಸುವ ಕ್ಷಣದಲ್ಲೆ !

ನಾರದ ಮುನಿಯನ್ನು ಅಶ್ವಪತಿ ಸ್ವಾಗತಿಸುವನು)

**ಅಶ್ವಪತಿ.**— ಶುಭವಾಗಲಿ ಮುನಿವರ್ಯನೆ.
ತವದರ್ಶನ ನೆನದಲ್ಲಿ !
ಶುಭ ಕಾಂಕ್ಷೆಯ ನಾವ್ಕಾದಿರೆ
ಒಂದಿಹ ಬರ ಸೊಗವಲ್ಲಿ !

**ನಾರದ.** - ಕಲ್ಯಾಣವು ಕಲ್ಯಾಣವು,
ಜಗವೆಲ್ಲರಿಗೆ
ಕಲ್ಯಾಣವು ಕಲ್ಯಾಣವು
ತವೆಮ್ಮೆಲ್ಲ ರಿಗೆ

**ಅಶ್ವಪತಿ:**— ಕಲ್ಯಾಣವ ಹರಸಿರಿ ಋಷಿವರರೇ
ಕಲ್ಯಾಣವ ಕಾದಿರುತಿಹ ಈ ವಧುಗೇ

**ನಾರದ:** 'ಕಲ್ಯಾಣವ ಕಾದಿರುತಿಹ ಈ ವಧುಗೇ' ?

**ಅಶ್ವಪತಿ:**— ಸತ್ಯ ವಾನನೆ ವರನು,
ಸಾವಿತ್ರಿಯೇ ವಧುವು,
ಋಷಿವರರನುಗ್ರಹವ
ಕೋರುವಳು ಅನುದಿನವು

(ರಾಗ --ಯಮನ್ ಕಲ್ಯಾಣಿ)

**ನಾರದ** — ಕ್ಷಣಿಕ ಸುಖದಾಸೆಗೇ
ಮನಸೋತು ವರಿಸಿದೊಡೆ
ಮಿಗೆ ಬರುವ ದಾರುಣವ
ಸಹಿಸಲಾರೆ ನಿ—
ವರ್ಣಿಸಲಾರೆ.
ವರುಷ ವಿಂದಿಗೆ ಮುಂಚೆ
ವರನ ಬಾಳಿನ ಸಂಜೆ
ಕಾಣುತಿರೆ ಕಣ್ಮುಂದೆ

ಮುದವದೇನೇ ?
ಹೆದವದೇನೇ ?

**ಅಶ್ವಪತಿ:—** ಏನೇನು? ಇಂತಿಹುದೆ
ವಿಧಿಲಿಖಿತ ವೈಚಿತ್ರ್ಯ !
ಪೇಳಿದುವೆ ಒಳಿತಾಯ್ತು,
ಉಳಿವುದಕೆ ಹಿತವಾಯ್ತು,
ಚಿರಋಣಿಗಳ್ನಾವು.
ಬೇಡ, ಮಗಳೇ, ಬೇಡ
ಬೇರೊಬ್ಬನನು ಕಾಂಬ
ಕ್ಷಣದ ಸುಖವನು ನೋಡೆ
ಬಾಳ್ಕಣ್ಣುಗೂಡೆ....

**ನಾರದ:—** ಅದುವೆ ಹಿತವೂ
ನನ್ನ ಮತವೂ

**ಸಾವಿತ್ರಿ:—** ಮನವ ತೆತ್ತಿರೆ ನಾನು
ಮರಳಿ ಕೊಂಬುದೆ ಸಾವು
ಒಲವ ನೀಡಿದ ಮೇಲೆ
ಹೊಲಸು ಗೈವುದೆ ನೋವು

ನಿರ್ಮಲದ ಕ್ಷಣ ನಾಲ್ಕು
ಬಾಳ್ವೆ ಮೆರೆಸಲು ಸಾಕು
ಕದಲಲೊಲ್ಲೆ. ನಿಶ್ಚಯದಿ
ಬದಲೆ ಒಲ್ಲೆ.

**ಅಶ್ವಪತಿ:—** ಮಗಳೇ ನೀ ವೈಧವ್ಯ ದಾರುಣವ
ಕನಸು ಮನಸಿಲಿ ಎಂದು ಸಹಿಸಲೊಲ್ಲೆ,

**ನಾರದ:—** ಎಳೆತನದ ಮನದಿಂದ
ಮಳೆಬಿಲ್ಲ ನೆಚ್ಚದಿರು

ಕಂಡರೆಕ್ಷಣದೊಳಗೆ
ಮಾಯುವಲ್ಲೇ !

**ಸಾವಿತ್ರಿ**:— ನಾನಿನ್ನೇನ ನೊಲ್ಲೆ.
ಮಾನವಂತೆಗೆ ತಂದೆ,
ಒಂದೆ ಒಂದಿರೆ ಮನವು,
ದಾನವಿತ್ತುವ ಹರಿಸಿ
ಗ್ಲಾನಿಬರಿಸಲೊಲ್ಲೆ,
ಪ್ರಾಜ್ಞ, ನೀ ಹರಸುವೊಡೆ
ಸತ್ಯ ಪ್ರೇಮದ ಬಲದಿ
ಸಾವಗೆಲ್ಲ ಬಲ್ಲೆ.

**ನಾರದ**:— ಬಾಳ ದೇಗುಲದಲ್ಲಿ
ಪ್ರೇಮ ದೀಪವ ಬೆಳಗಿ
ತುಂಬು ಕತ್ತಲೆಯನ್ನು ನೀಹರಿಸ ಬಲ್ಲೆ !
ಬಾಲೆ—ನೀ ಬೆಳಕ ಬಿತ್ತರಿಸ ಬಲ್ಲೆ
ಶೀಲೆ, ನೀ ಕಾಲನಂ ಗೆಲ್ಲ ಬಲ್ಲೆ.

## ದೃಶ್ಯ ೪.

[ಸಾವಿತ್ರಿಯ ವಿವಾಹಾನಂತರ—ಅರಮನೆಯಲ್ಲಿ ಉಳಿದ ಸಖಿಯರಿಬ್ಬರು.]

(ರಾಗ—ಪಹಾಡು)

**ಹಿಮ್ಮೇಳ**:— ಆ ಮೋದಾ
ಮನಕಾಮೋದಾ
ಜನಕಾಮೋದಾ
ಜಗಕಾಮೋದಾ
ಆ ಮೋದಾ

**ಮೊದಲ**:— ಬನದಲಿ ಸಖಿ ಎಲೆಮನೆಯೊಳು
ಮನಮೋಹನನೊಳು ಬೆರೆತಿಹಳೂ—

**ಗೆಳತಿ:—** ತನ್ನಂ ತಾನೇ ಮರೆತಿಹಳೂ !

**ಸಖಿ:—** ಚೆಲುವಿನ ಪತಿ, ನಲವಿನ ಮತಿ
ಒಲುಮೆಯೊಳತಿ ಮರೆತಿಹಳೂ !

**ಗೆಳತಿ:—** ಗೆಳತಿಯರುಂವರಂ ತೊರೆದಿಹಳೂ—

**ಉಭಯರು:—** ಸಖಿ ಸಾವಿತ್ರಿ, ಏನೀ ಮೈತ್ರಿ !
ಕೆಳೆತನವನು ನೀ ದೂರಿರಿಸೀ,
ಎಳೆತನವನು ನೀ ಮೂದಲಿಸೀ,
ಈ ಖೇದ, ಅತಿ ವೇಧ,
ಸಹಿಸೆವು ವ್ಯಥೆ ಅಗಾಧ

## ದೃಶ್ಯ ೫.

[ಪರ್ಣಶಾಲೆಯ ಎದುರು, ನಿತ್ಯದ ಕೆಲಸಕ್ಕೆ ಅಣಿಯಾಗಿ ಹೊರಟ ಸತ್ಯವಾನ]

(ರಾಗ—ಪಾಂಡ್)

**ಸತ್ಯವಾನ:—** ಮನೋಹರೇ, ಮನೋಹರೆ!
ಬಾರೇ ನೀರೇ ವೈಯ್ಯಾರೆ—ಮನೋಹರೆ !
ದಿನದ ಕೆಲಸಕೆ ಸಾರೆ
ಕೊಡಲಿಯನು ತಾರೆ....
ಮನೋಹರೇ

**ಸಾವಿತ್ರಿ:—** ತರಲಾರೆ, ಇರಲಾರೆ, ಏಕಾಕಿ
ಎಲೆಮನೆಯೊಳಿರಲಾರೆ ಏಕಾಕಿ.
ಏತಕೋ ಮನವಿಂದು, ಮುದುರುತಿದೆ ಅತಿ ಬೆಂದು,
ನಿನ್ನಗಮನವನಿಂದು ತಡೆಯದಿರಲಾರೆ....
ನಿನ್ನ ಕೆಲಬಲವನ್ನು ಅಗಲಲಾರೆ....

**ಸತ್ಯವಾನ:—** ಮರುಳೇನಿದು ?
ಛಲವೇನಿದು ?
ಭಯವೇನಿದು ?
ಮನೋ....ಹ....ರೇ

ದಿನದ ಕಜ್ಜವನಿಂದು
ಬಿಡಲು ಕಾರಣವೇನೆ ?
ಮನದ ನೆಮ್ಮದಿಗಿಂದು
ಭಂಗವೇನೆ?
ಮನೋಹರೇ....

**ಸಾವಿತ್ರಿ:—** ಬರಲಾಸೆಯಾಗುತಿದೆ
ಜತೆಯೊಳಗೆ ನಾಥಾ,
ಇರಲಾಸ ಯಾಗುತಿದೆ
ಕ್ಷಣ ಕ್ಷಣಕು ದಾತಾ,

**ಸತ್ಯವಾನ:—** ಬರಲೇನು ಬಾಧಕವು ?
ಇರಲೇನು ಬಾಧಕವು ?
ಚರಿಸೆವಂತೆ........ಸಂ
ಚರಿಸೆವಂತೆ.
ಬನದ ಸಿರಿಯನು ನೋಡಿ,
ಮನದ ಲಾಸ್ಯವ ಹೂಡಿ,
ಮಿಗುವ ಕಳೆತನದಿಂದ,
ನಗುವೆ ಯಂತೆ
ನಲಿವೆ ಯಂತೆ

## ದೃಶ್ಯ. ೬.

(ಅರಣ್ಯಗಾಮಿಯರಾದ ಸಾವಿತ್ರಿ ಸತ್ಯವಾನರು)

**ಹಿಮ್ಮೇಳ:—** ಚರಿಪರಂತೆ . . . ಸಂ........
ಚರಿಪಂತೆ........

ಮುಗಿಲಂತೆ ಹಗುರಾಗಿ ಮಿಗದಂತೆ ಲಘುವಾಗಿ
ಕಾನನವ ಸೇರಿ. ।
ಕಾನನವ ಸೇರಿ ।

ದಿನವಂತೆ ದಿನವೆಂದು ಮನಕಿಲ್ಲ ನೆನನೊಂದು
ಕೊಡಲಿಯ ಬೀರಿ !
ಕೊಡಲಿಯ ಬೀರಿ !

ಬೀಸುತ್ತ ಹಾಸುತ್ತ ವ್ಯಾ ಜಿವರ ಸುರಿಸುತ್ತ
ಶ್ರಮಿಸಲು ಭಾರಿ !
ಶ್ರಮಿಸಲು ಭಾರಿ!

ಯಾಕೇನೊ ! ಏನೇನೊ ! ಕತ್ತರಿ ಸುತ್ತಲು
ಕೊಡಲಿಯು ಜಾರಿ !
ಕೊಡಲಿಯು ಜಾರಿ !
ಕುಸಿದನು ಅಸುವನು ಹುಸಿಯಾದ ಬಾಳನ್ನು
ತೋರಿವಂತೆ ಸಾರಿ !
ತೋರಿವಂತೆ ಸಾರಿ !

(ರಾಗ—ಭೈರವಿ)

**ಸಾವಿತ್ರಿ:**— ಏನಾಯ್ತು ಸಾಗೈದ ತಪವೆಲ್ಲ, ಕಾಣೆ
ಅಗಲುವೆಯ ಪತಿದೇವ ಬಿಟ್ಟಿರಿನ್ನಾಣೆ...

(ಯಮನು ಕಾಣಿಸಿ ಕೊಳ್ಳುವನು)

ಆರುನೀ ಆರುನೀ, ಆರುನೀ
ಛಾಯಾ ಶರೀರಿ !
ತೊಲಗಾಚೆ, ತೊಲಗಾಚೆ, ಏನಿಲ್ಲಿ ಕೆಲಸ !
ಬಾಳನರ್ತನದಲ್ಲಿ ನಿನ್ನದೇಂ ವಿರಸ !

(ಯಮನನ್ನು ಹಿಂಬಾಲಿಸುವಳು)

(ರಾಗ—ಪೂರ್ವಿ)

**ಸಾವಿತ್ರಿ:**— ನೀಡೇ, ನೀಡೇ, ಪತಿದೇವನನು ದೇವ

(ರಾಗ—ಮೋಹಿನಿ)

ಯಮ:— ಆರುನೀ, ಮರುಳೇನು? ಮೃತ್ಯು ಲೋಕವ ಬಿಟ್ಟು
ಎನ್ನೊಡನೆ ಪಣಕೊಟ್ಟು ಬರುವೆ ಎಲ್ಲಿ?
ಇಳೆಯ ಋಣ ಸಂದವನ ಎಳೆದು ಒಯ್ಯುವಯಮನ
ಬಳಸಿ ಬೆನ್ನಟ್ಟಿದೊಡೆ ಬರುವದೇನೇ?
ಕಳೆದ ಜೀವನ ತಾನು ಬಿಡುವನೇನೆ?
ಕಾಲನೆಂಬವನವಗೆ ಕರುಣೆ ಏನೆ!

(ರಾಗ—ಪೂರ್ವಿ)

ಸಾವಿತ್ರಿ: — ನಿನ್ನ ಕರ್ಮವ ನೀನು
ನಡೆಸುವೆಯ ಯಮಧರ್ಮ;
ಎನ್ನ ಕರ್ಮವ ನಾನು
ನಡೆಸಲೇತಕ್ಕೆ ತಡೆವೆ?
ಪತಿಯ ಪಡಿನೆಳಲಿಹಳು ಸತಿಯೆಂಬ ಈ ಜೀವ.
ನೀಡೇ.... ನೀಡೇ.... ಪತಿದೇವನನು ದೇವ.

(ರಾಗ—ಮೋಹಿನಿ)

ಯಮ:— ನಿನ್ನ ಪ್ರೇಮವ ಮೆಚ್ಚಿ
ವರ ಒಂದ ನೀಡುತಿಹೆ
ಪತಿಯ ಜೀವವನುಳಿದು
ಬಯಸುವುದ ಬೇಡು.

(ರಾಗ—ಪೂರ್ವಿ)

ಸಾವಿತ್ರಿ:— ಕರುಣೆಯೊಳು ಅಪಾರ
ಎನಿಸುವೆಯ ಯಮಧರ್ಮ!
ಕರುಣೆನಿನ್ನಯ ಪತಿಯ
ಹಿರಿಯಂಗೆ ನಯನಗಳ

(ರಾಗ—ಮೋಹಿನಿ)

ಯಮ:— ನೀಡಿದೆನು, ಮರಳು ನೀ

(ರಾಗ—ಪೂರ್ವಿ)

**ಸಾವಿತ್ರಿ:—** ನೀಡುನೀ, ನೀಡುನೀ ಸತ್ಯವಾನನ ಜೀವ

(ರಾಗ—ಸೋಹಿನಿ)

**ಯಮ:—** ಯಾಕೆ ನೀ ? ಯಾಕೆ ನೀ ಬಲುದೂರ ಬರುತಿಹೆಯ
ನರರ ನೆಲೆಯನು ಬಿಟ್ಟು ಇನ್ನು ಬರುತಿಹೆಯ?

(ರಾಗ—ಪೂರ್ವಿ)

**ಸಾವಿತ್ರಿ:—** ಬರಲೊಲ್ಲದೇಂಗೈವೆ
ಪತಿಯ ತೊರೆವಂದೆನಗು ಸಾವಲ್ಲವೇನೂ ?

(ರಾಗ—ಸೋಹಿನಿ)

**ಯಮ:—** ನಿನ್ನ ಪ್ರೇಮುವ ಮೆಚ್ಚಿ
ಬೇರೊಂದು ವರವೀವೆ—
ಪತಿಯ ಜೀವವನುಳಿದು
ಬಯಸುವುದ ಬೇಡು

(ರಾಗ—ಪೂರ್ವಿ)

**ಸಾವಿತ್ರಿ:—** ಕರುಣೆಯೊಳು ಅಪಾರ
ಎನಿಸುವೆಯ ಯಮಧರ್ಮ
ಕಳೆದ ರಾಜ್ಯವ ಕೊಡಿಸು
ಎನ್ನ ಪತಿ ಕುಲಕೇ

(ರಾಗ—ಸೋಹಿನಿ)

**ಯಮ:—** ನೀಡಿದೆನು, ಮರುಳು ನೀ

(ರಾಗ—ಪೂರ್ವಿ)

**ಸಾವಿತ್ರಿ:—** ನೀಡು ನೀ, ನೀಡುನೀ ಸತ್ಯವಾನನ ಜೀವ

ರಾಗ—ಸೋಹಿನಿ)

**ಯಮ:—** ಏನು ಛಲ? ಏನು ಛಲ? ಛಲವೇನು ಬಾಲೆ
ನನ್ನ ಮನವೂ ಅಚಲ—ಕದಲಲೊಲ್ಲೆ

ಮೂರನೆಯ ವರ ಒಂದ ನೀಡಿದೆನು, ಬೇಡುವುದು
ಪತಿಯ ಪ್ರಾಣವನುಳಿದು ಬೇಡು, ಬೇಡು.

(ರಾಗ—ದರ್ಬಾರಿ ಕಾನಡಾ)

**ಸಾವಿತ್ರಿ**— ಎನ್ನ ಉದರದಿ ಮುನ್ನ
ಸಂತಾನಶ್ರೀ ಹರಸಿ

**ಯಮ:**— ಹರಸಿದೆನು ಮರಳು ನೀ—
ಬರಬೇಡ ಮುಂದೆ

**ಸಾವಿತ್ರಿ:**— ಶರಣಾದೆ ಓ ದೇವ
ನಿನ್ನ ಪ್ರಕೃತಿಗೆ ಋಣಿಯಾದೆ
ಆದರೊಂದೇ ಹಲುಬು
ಬಗೆಹರಿಸು ತಂದೆ

**ಯಮ:**— ಹಲುಬೇನು ? ಹಲುಬೇನು ?

**ಸಾವಿತ್ರಿ:**— ಪತಿಯ ನೀನೊಯ್ಯುತಿಹೆ
ಸಂತಾನ ಹರಸಿಹೆಯ ?
ಸಾಧ್ವಿ ಜೀವನದಲ್ಲಿ
ಸಾಧ್ಯವೆಂತು ?

**ಯಮ:**— ಬಲು ಜಾಣೆ !
ಸಾವಿತ್ರೀ ನೀ ಗೆಲ್ದೆ
ಮಾತಿನಾ ಉರುಳೊಳಗೆ ಎನ್ನನೀ ಸಿಲುಕಿಸುತೆ
ಎನ್ನ ಉರುಳಿಂ ನಿನ್ನ ಪತಿಯ ಗೆಲ್ದೆ
ಪ್ರೀತಿ ಗೆದ್ದಿತು ಸಾವ

**ಸಾವಿತ್ರಿ:**— ನಿನ್ನ, ನಿನ್ನ
ಕರುಣ ಪ್ರಭಾವ

**ಯಮ:**— ಅಂತು ಯಮನಿಗೆ ಸೋಲು
ನಿನ್ನ ಕೈಯೇ ಮೇಲು

(ಸತ್ಯವಾನನು ನಿದ್ರೆಯಿಂದೇಳುತ್ತಿದ್ದಾನೆ)

(ರಾಗ—ಪೀಲು)

**ಸತ್ಯವಾನ:—** ನಾ, ಆವ ಕನಸ ಕಂಡೆ
ನಾ ಆವ ಕನಸ ಕಂಡೆ
ಆವ ಕನಸ ಕಂಡೆ!
ಸಹಚರಿಯು ಕಾಣಳು....
ಆವಭೀಕರಕಾಯನೋ
ಸೆಳೆದೊ....ಯ್ದನೊ!
ಆವ ಕನಸ ಕಂಡೆ

(ಸಾವಿತ್ರಿ ಯಮನೆಡೆಯಿಂದ ಮರಳುವಳು)

**ಸಾವಿತ್ರಿ:—** ನಾ ಬಂದೆನಲ್ಲವೆ?
ತವ ಬದುಕ ತಂದೆನಲ್ಲವೆ!
ಜವನಿಂದ ತಂದೆನಲ್ಲವೆ!
ನಾ ತಂದೆನಲ್ಲವೆ.



## ಪಾತ್ರಗಳು

**ಸಿದ್ಧಾರ್ಥ**—(ಶಾಕ್ಯದೊರೆ ಶುದ್ಧೋದನನ ಏಕ ಮಾತ್ರ ಪುತ್ರ.)

**ಯಶೋಧರಾ**—ಸಿದ್ಧಾರ್ಥನ ಮಡದಿ.

**ರಾಹುಲ**—ಸಿದ್ಧಾರ್ಥನ ಕುವರ.

**ಶುದ್ಧೋದನ**—ಶಾಕ್ಯ ದೊರೆ.

**ಚನ್ನ**—ಸಿದ್ಧಾರ್ಥನ ಗೆಳೆಯ.

ಪುರವಣಿಗರು, ಸ್ತ್ರೀಯರು, ಕುಷ್ಟರೋಗಿ, ಮುಪ್ಪಿನವ ಮೊದಲಾದವರು.



## ಮೊದಲನೆಯ ದೃಶ್ಯ

(ಪ್ರಾತಃಕಾಲದೊಡನೆ ಅರಮನೆಯ ಸಖಿಯರು ರಾಜಕುಮಾರನಾದ
ಸಿದ್ಧಾರ್ಥನ ಸಲುವಾಗಿ ಶುಭ ಗೀತಗಳನ್ನು ಹಾಡುವರು)

(ರಾಗ--ಶಂಕರಾಭರಣದ ಕೆಳಗಣ ಸ್ವರಗಳು)

**ಸಖಿಯರು:** ಸೂರ್ಯೋದಯವಾಗುತಿದೆ ನಭದೇ
ನವೋದಯವಾಗುತಿದೆ ದಿನದ
ಭಾವೋದಯವಾಗುತಿದೆ ಮನದ
ಶುಭೋದಯವಾಗುತಿದೆ ಸುಖದ.

[ಸಿದ್ಧಾರ್ಥ, ರಾಹುಲ, ಯಶೋಧರೆಯರು ಆಗಮಿಸುವರು.]

ಶಾಕ್ಯ ಚಂದ್ರಮಗೆ ಸುಸ್ವಾಗತವು,
ರಾಜಹಂಸನಿಗೆ ವಿಜಯೀಭವವು.
ತವಕುಲ ಬಹುಘನ
ತವಸೇವೆಗೆ ಜನ
ಸಲಿಸಲು ತನುಮನ
ಕಾದಿಹರೈ ಸುಮನ.

(ರಾಹುಲ ಬರುತ್ತಲೆ)

ರಾಹುಲ ಚಂದ್ರಮ, ಸುಪ್ರಭಾತವು
ಯಶೋಬಿಂಬಗೆ, ಸುಪ್ರಭಾತವು

(ಯಶೋಧರೆ ಬರಲು)

ಯಶೋಮತಿಗೆ ಸುಪ್ರಭಾತವು
ಶಾಕ್ಯ ಮಾನಸೆಗೆ ಸುಪ್ರಭಾತವು

(ಸಿದ್ಧಾರ್ಥ ಬರಲು)

ಘನೋದ್ದಾಮಗೆ ಸುಪ್ರಭಾತವು
ಮನೋಮೋಹನಗೆ ಸುಪ್ರಭಾತವು

ರಾಹುಲ: ಕ್ಷೇಮವೆ ಸಖಿಕುಲ—'ಸುಪ್ರಭಾತದಿ' ?
ಸಖಿ: ಕ್ಷೇಮವು ಈ ಜಗ— ಸುಪ್ರಭಾತವು
ಯಶೋ: ಕ್ಷೇಮವೆ ಕೆಳೆಜನ—ಸುಪ್ರಭಾತದಿ ?
ಸಖಿ: ಕ್ಷೇಮವು ತವಜನ—ಸುಪ್ರಭಾತವು.
ಸಿದ್ಧಾ: ಕ್ಷೇಮವೆ ಕೋಮಲ ಲಲನಾಲೋಕ ?
ಸಖಿ: ಕ್ಷೇಮವು, ಸರ್ವವು, ಸುಖಿ ಈ ಲೋಕ.

(ಸಖಿಯರೆಲ್ಲರು ತೆರಳುವರು)

(ರಾಗ- ಹಂಸ ಧ್ವನಿ)

ರಾಹುಲ: ತಾಯೇ ಚೆಲುವು ದೋರಿದೆ !
ರವಿಯ ಬಿಂಬ ಮೂಡಿದೆ
ಬೆಳಕು ತುಂಬ ಹಾಸಿದೆ
ಎಸಿತು ಶೋಭೆಯು
ಈ ಬೆಳಗು, ಎಸಿತು ಶೋಭೆಯು!

ದಿನವೂ ದಿನವ ಮೀರುತೆ
ಹಳೆಯ ಬೆಡಗ ಕಳಚುತೆ
ಹೊಸತು ಅಡಿಯನಿರಿಸುತೆ
ಚೆಲುವು ಸೂಸಿ ಬಂದಿದೆ
ನಗುವ ಹಾಸಿ ತಂದಿದೆ

ಯಶೋ: ಮಾಗಿ ಬಂದಿದೆ
ಕುವರಾ, ಸಾಗಿ ಬಂದಿದೆ !
ತಳಿರುಗಳೆಲ್ಲವು ಹೊನ್ನಲಿ ಮಿಂದು
ಕಮಲವು ಅರಳಿದೆ ನಗುತಲಿ ನಿಂದು;
ಹಕ್ಕಿಯ ಕೊರಳಿಗೆ ಶ್ರುತಿಯನು ಮೀಂಟಿ
ಅಳಿಕುಲ ಮರೆತಿದೆ ಮಧುವನು ಈಂಟಿ!

ರಾಹು: ಬಾಬಾ, ನಲಿಯವ
ನೊಡೀ ತಣಿಯವ
ಬಯಲಾ ದಾಟುವ
ಜಗವಾ ಸುತ್ತುವ.

ಸಿದ್ಧಾ: 'ಬಯಲಾ ದಾಟುವ
ಜಗವಾ ಸುತ್ತುವ.'

ಯಶೋ: ತೂಗುಯ್ಯಾಲೆಯನೇರುವ ಬಾ ಬಾ
ರಾಗಾಲಾಪದಲಿ
ಬಣ್ಣಬೆಡಗುಗಳು ಸ್ವಾದಿಪ ಬಾ ಬಾ
ನೋಡಾ ಧೃಶ್ಯದಲಿ

ರಾಹು: ಬಾ ಬಾ ನಲಿಯುವ
ನೋಡೀ ತಣಿಯುವ
ಬಯಲಾ ದಾಟುವ
ಜಗವಾ ಸುತ್ತುಪ

ಸಿದ್ಧಾ: 'ಬಯಲಾ ದಾಟುವ
ಜಗವಾ ಸುತ್ತುವ.'

ಯಶೋ: ಏನೀಯೋಚನೆ ಮೂಡಿದೆ ಮನದಲಿ
ಸೊಗಸಿನ ವೇಳೆಯಲಿ ?
ಬಾಲನ ಕೂಡುತ ಕ್ರೀಡಾವನದಲಿ
ತೂಗುವ ಪ್ರೇಮದಲಿ

ಸಿದ್ಧಾ: 'ಬಯಲಾ ದಾಟುವ
ಜಗವಾ ಸುತ್ತುವ.'

(ಗೆಳೆಯ ಚನ್ನ ಬರುವುದನ್ನು ಕಂಡು)

**ಯಶೋ:** ನೀ ಬಾ ರಾಹುಲ
ಚನ್ನನು ಬಂದಿಹ,
ತಂದೆಯು ಜತೆಯಿರಲಿ.
ನಾವೇ ಪೋಗುವ, ಮಂಚದಿ ತೂಗುವ
ಹಾಡುತ ಪಾಡುತಲಿ. (ತೆರಳುವರು)

**ಸಿದ್ಧಾ:** ಬಯಲಾ ದಾಟುವ
ಜಗವಾ ಸುತ್ತುವ
ನಿಜವಾ ಅರಿಯುವ
ಬದುಕಾ ಬೆಳಗುವ—........

(ರಾಗ—ತಿಲಕ ಕಾಮೋದ)

**ಚನ್ನ:** ದೇವ, ಪ್ರಭುದೇವ.

**ಸಿದ್ಧಾ:** ಬಯಲಾ ದಾಟುವ
ಜಗವಾ ಸುತ್ತುವ
ನಿಜವಾ ಅರಿಯುವ
ಬದುಕಾ ಬೆಳಗುವ (ತನ್ನಷ್ಟಕ್ಕೆ ಅನ್ನುತ್ತಿರುವನು)

**ಚನ್ನ:** ದೇವ, ಪ್ರಭುದೇವ
ತಲ್ಲೀನ ಭಾವಾ........ದೇವ.

**ಸಿದ್ಧಾ:** ನೀ ಬಂದೆಯಾ—ಚನ್ನ?

**ಚನ್ನ:** ಯೋಚಿಪುದದೇನ್ ದೊರೆಯೆ
ಆವುದದು—ತಡೆಯು!

**ಸಿದ್ಧಾ:** ಏಂ ಗೆಳೆಯ !

**ಚನ್ನ:** ಯೋಚಿಪುದದೇನ್ ದೊರೆಯೆ!
ಆವ ತಡೆಯು

ಸಿದ್ಧಾ : ಕೇಳ್ ಚನ್ನ,

ಚನ್ನ : ಏಂ ದೊರೆಯೆ,

ಸಿದ್ಧಾ : ಕೇಳ್ ಚನ್ನ,

ಮನದಿ ಮೂಡಿವೆ ಬಯಕೆ
ಶಾಂತಿ ಕುಲುಕುವ ಬಯಕೆ;
ಈ ಸೊಗದ ಸೌಧದ ಆಚೆ
ಜಗವ ತುಳಿವ ಬಯಕೆ.

ನಾನ್ ಶಿಶುವೆ!
ಚೆಲುವಿನೀ ಪಂಜರದಿ
ಗಿಳಿಯಂತೆ ಮೆರೆಯುತಿಹೆ
ರತ್ನ ಕೆತ್ತಿದ—ಸೆರೆಯು
ಆದರೂ ಸೆರೆಯು !

ಪಿತನದೇತಕೆ ಯನ್ನ
ಸೊಗದ ಬಂಧನದಲ್ಲಿ
ಕಾವಲಿಟ್ಟಿಹೆ—ಚನ್ನ !
ಕಾಣಬಯಸುವೆನು....

ನಗರದೊಳಗೇನಿಹುದು ?
ರಾಜ್ಯ ಸಿರಿ ಎಂತಿಹುದು ?
ಕಾಣ ಬಯಸುವೆನು
ಈ ಸೆರೆಯ ದಾಟಬಯಸುವೆನು!

ಚನ್ನ : ಇದಕೆ ಏತರ ಚಿಂತೆ
ನಗರ ಪರಿಭ್ರಮಣೆಗೆ!

ಪಿತನ ಸಮ್ಮತಿಗಳಿಸಿ—ಬರುವೆನಂತೆ.
ತ್ವರೆಯೊಳ್ ಬರುವೆನಂತೆ

(ಎಂದು ತೆರಳುವನು)

**ಸಿದ್ಧಾ:** ಸೌಧದಾಚೆಗೆ ಏನು ?
ನಗರದಾಚೆಗೆ ಏನು ?
ಬಯಲಿನಾಚೆಗೆ ಏನು ?
ಬಾಳಿನಾಚೆಗೆ ಏನು ಏನು?

ಸೊಗದ ಆಚೆಗೆ ಏನು ?
ಎಲ್ಲಕಾಚೆಗೆ ಏನು....ಏನು ? ಏನು!

——ooo——

## ಎರಡನೆಯ ದೃಶ್ಯ

(ರಾಗ—ಭೀಮಪಲಾಸ)

[ಚನ್ನ ಶುದ್ಧೋದನರು ಜತೆಯಾಗಿ ಬರುತ್ತಿದ್ದಾರೆ.]

**ಶುದ್ಧೋದನ:** ಚಿಂತಿಪನೇ ಸುಕುಮಾರ ?
ಚನ್ನ, ಚಿಂತಿಪನೇ ಸುಕುಮಾರ!
ಆವ ನೋವಿನ ನೋಟ
ಆವ ಚಿಂತೆಯ ಕಾಟ
ಆವ ಅಹಿತದ ಭೇಟಿ—ಆದುದಂತೆ ?
ವನಿತೆಯರ ಲಾಸ್ಯದಲಿ,
ಗೆಳೆಯರಪಹಾಸ್ಯದಲಿ
ಮಡದಿ ಮಕ್ಕಳ ಮುಗ್ಧ ಭಾಷೆಯಲ್ಲೇ ?

**ಚನ್ನ:** ಸಾಧ್ಯವೆಂತು!
ಶಶಿಯ ನಗುವಲಿ ಪೂರ್ವ ರಾಹುವಿನೊಳಿಲ್ಲ
ದೆಸೆಯ ಬೆಳಗುತಲಿರುವ ಕಾಂತಯೊಳು ಅಲ್ಲ
ತಲೆವಾಗಿ ನಿಂದಿರುವ ಸಖಿಸಖರೊಳಿಲ್ಲ—

**ಶುದ್ಧೋ:** ಇನ್ನೆಲ್ಲಿ, ಮುನ್ನೆಲ್ಲಿ ಪೇಳು ಚನ್ನ ?
ಇಳೆಗೆ ಅಮರಾವತಿಯ

ಇಳಿಸಿ ನಿಲಿಸಿದೆ—ಚನ್ನ
ಬಳಿಗೆ ಸೊಗಲಾವಣ್ಯಗಳ
ಬಳಸಿ, ತುಂಬಿದೆ—ಚನ್ನ

ಚನ್ನ: ಅಳುಕುತಿಹೆನೋ, ನುಡಿಯಲ್
ಅಳುಕುತಿಹೆನೊ.
ಅದುವೆ ಸೊಗಲಾವಣ್ಯ
ಗಿಣಿಯ ಪಂಜರವಂತೆ
ಜಗವ ನೋಡುವ ಬಯಕೆ
ಕಾಡ್ವುದಂತೆ !

ಶುದ್ಧೋ: ಆವಯೋಗವ ತಡೆಯೆ
ಇಷ್ಟೆಲ್ಲ ಹೂಡಿದೆನೋ
ಅದನೆ ಸಂಧಿಪುದೇನು—ಚನ್ನ
ಭವದ ದುರ್ಗಮ ಪಥದಿ
ನೋವು ನರಳಿಕೆ ಕಂಡು
ಮರಳಿ ಬರುವನೆ ಮಗನು.... ಚನ್ನ ?

ಚನ್ನ: ನಗರಪನು ಚರಿಸುತಲಿ
ಸೊಗವುಣ್ಣ ಬಹುದಲ್ಲ

ಶುದ್ಧೋ: ಬೇಡ, ಬೇಡವು—ಚನ್ನ,
ತಡೆಯುವುದೆ—ಚನ್ನ!

ಚನ್ನ: ಹರಿವ ಅಬ್ಬಿಯ ತಡೆದು
ನಿಲಿಸಲುಂಟೇ ?
ಶುದ್ಧೋ: ಕನಸಿನರಮನೆ ಕುಸಿವ
ಗಳಿಗೆ ಬಂತೇ!

**ಚನ್ನ:** ಚಿಂತೆಯೇತಕೆ ದೊರೆಯೆ!
ಪುರವ ಸಿಂಗರಿಸುತ್ತೆ,
ಕೊರಗ ಮರೆಮಾಜುತ್ತೆ,
ನಗುವಿನುತ್ಸವಗೈದು—
ಮನವೊಲಿಸ ಬಹುದು....

**ಶುದ್ಧೋ:** ದಾರಿ ಇಲ್ಲಾ, ಚನ್ನ, ಬೇರೆ ಇಲ್ಲಾ!
ಎಲ್ಲ ನಿನಗೊಪ್ಪಿಸುವೆ!
ಕಪಿಲವಸ್ತುಗೆ ಹರ್ಷ
ತುಂಬಿತುಳುಕಿಸು—ನೀನು;
ಹೆಗಲ ಬಳಿಯೊಳೆ ನಿಂದು ಸಾಗಿಸೆಲ್ಲ.
ಕಸ, ಕೂಗು, ಕಿರಿ ನೋವು
ಯಾವುದೂ ಬಾರದೆಲೆ—ಹಾಯಿಸಲ್ಲ.

**ಚನ್ನ:** ಗೈವೆನೆಲ್ಲ, ದಿವ್ಯ ಚಿತ್ತಗೆ ಶಾಂತಿ
ಬರಿಪೆನಲ್ಲ—

—ooo—

## ಮೂರನೆಯ ದೃಶ್ಯ

(ರಾಗ—ದುರ್ಗ)

(ಬೀದಿಯಲ್ಲಿ ಡಂಗುರದವನು ಪ್ರವೇಶಿಸುವನು)

**ಡಂಗುರ:** ಕೇಳಿರೆಲ್ಲಾ—ಮುದವನ್ನೆ
ತಾಳಿರೆಲ್ಲಾ:
ಹಿರಿಯ ದೊರೆಯಾಣತಿಯ
ಉಸುರುತಿಹೆ ಲಾಲಿಪುದು.
ತೋರಿರೆಲ್ಲ ಮುದವನ್ನು
ಬೀರಿರೆಲ್ಲ
ನೃಪಕುಮಾರರು ಬಂದು
ನಗರಚರಿಪರು ನಾಳೆ !

ಭಾಗ್ಯವಲ್ಲ ! ಜನಕೆ ಸೌ
ಭಾಗ್ಯವಲ್ಲ !
ಶಾಕ್ಯ ಚಂದ್ರಮನೊಲಿವ
ನಿಮ್ಮ ಪ್ರೇಮಾದರಕೆ !

ಕೇಳಿರೆಲ್ಲಾ ಎಚ್ಚರ
ತಾಳಿರೆಲ್ಲ;
ಹೇಯ ನೋಟಗಳನ್ನು
ಹುದುಗಿ, ನಗುವಲಿ ಮಿಂದು
ಬನ್ನಿರೆಲ್ಲಾ ಸ್ವಾಗತ
ತನ್ನಿರೆಲ್ಲಾ.

**ನಾಗರಿಕನೊಬ್ಬ:** ಏನಪೇಳ್ದೆ—ದೂತ
ನೀನೇನ ಪೇಳ್ದೆ ?
ಶಾಕ್ಯ ಭಾಗ್ಯೋದಯನು
ನಗರಕ್ಕೈದುವನೇನು ?,

**ಡಂಗುರಿಗ:** ಅದನೆ ಅಂದೆ—ಜನಕೆ
ಮುದವ ತಂದೆ.

**ಜನರು:** ಇದುಭಾಗ್ಯ, ಇದುಭಾಗ್ಯ, ಇದುಭಾಗ್ಯ ಜನಕೆ !
ಮದವಾರ್ತೆ ಮುದವಾರ್ತೆ ನಿಜದೆ
ದೊರೆಯಕುವರನ ನಗುವ ಕಾಣುವುದೆ ಭಾಗ್ಯ
ನಿಜಭಕುತಿ ಸಲಿಸುವುದು, ಅದುವೆ ಭಾಗ್ಯ

—೦೦೦—

## ನಾಲ್ಕನೆಯ ದೃಶ್ಯ

(ಸಿಂಗರಿಸಿದ ನಗರದಲ್ಲಿ, ಸ್ವಾಗತಕ್ಕಣಿಯಾಗಿ ನಿಂತಿರುವ ಗಂಡಸರು, ಹೆಂಗಸರು)

(ರಾಗ--ತೆಲಂಗ್)

**ಪುರುಷರು:** ಚೆಲುವಾಗಲಿ, ಚೆಲುವಾಗಲಿ
ಯುವದೊರೆಗೆ
ಗೆಲುವಾಗಲಿ ಗೆಲುವಾಗಲಿ
ದೊರೆ ನಿಮಗೆ.
ಕಪಿಲ ನಗರದ ಕೀರ್ತಿ
ನಮ್ಮ ಒಯಕೆಯ ಪೂರ್ತಿ
ಪ್ರಜೆಯ ಭಕುತಿಯ ಭವ್ಯಮೂರ್ತಿ !

(ರಾಗ—ಹಿಂದೋಲ)

**ಸ್ತ್ರೀಯರು:** ಆರತಿಯ ಬೆಳಗಿ,
ಎದೆಯಾರತಿಯ ತೊಳಗಿ.
ಹೃದಯ ವಿಕಾಸಗೆ
ಮೃದುತಮ ಭಾವಗೆ
ಸದ್ಗುಣಧಾಮಗೆ, ಆರತಿಯ ಬೆಳಗಿ
ಧೀರೋಧಾತ್ತಗೆ
ವರಧೀಮಂತಗೆ
ಸಿರಿ ಸಿದ್ಧಾರ್ಥಗೆ, ಆರತಿಯ ಬೆಳಗಿ.

**ಸಿದ್ಧಾ:** ಆನಂದವಾಂತೆ.
ಬಲು ಆನಂದವಾಂತೆ !

ಮೊಳಗುವ ವಾದ್ಯವು ಕರ್ಣಾನಂದವು !
ಭಕುತಿಯ ಸ್ವಾಗತ ಪೇರಾನಂದವು !

**ಚನ್ನ:** ಬೃಹದಾನಂದವು ಪುರಜನಕೆ
ತಮ್ಮಾಗಮನವೆ ಹೆಬ್ಬಯಕೆ

ಪುಣ್ಯೋದಯವಿದು ಈ ಜನಕೆ
ಆಶೋತ್ತರ ನೀ ನರಕಲುಕೆ.

(ದಾರಿಯಲ್ಲಿ ಕೂಗುತ್ತ ಬರುವನೊಬ್ಬ)

**ಕುಷ್ಠರೋಗಿ:** (ರಾಗ—ಬಿಭಾಸ್)

ದಾರಿಬಿಡಿ ದಾರಿಬಿಡಿ—ನಡೆಯಲಾರೆ
ಉಣಿಸನಿಡಿ ಉಣಿಸನಿಡಿ—ದಣಿಯಲಾರೆ!

**ಜನರು:** ಮುಟ್ಟದಿರು, ದೂರಸರಿ—ಮೂರ್ಖ ಜಂತು!
ಸೊಗದ ಉತ್ಸವದಲ್ಲಿ ಶನಿಯು ಬಂತು.

**ಸಿದ್ಧಾ:** ಕೇಳುತಿಹುದು, ಆರ್ತನಾದ!
ಆವ ದನಿಯು—ಹೃದಯ ಭೇದ!
ಸರಿಪರೇಕೆ ಜನರದೆಲ್ಲ?
ಥರಿಪರೇಕೆ—ಕಾಣೆನಲ್ಲ!

**ಕುಷ್ಠ:** ದಾರಿ ಬಿಡಿ ದಾರಿಬಿಡಿ—ನಡೆಯಲಾರೆ
ತುತ್ತ ನಿಡಿ ತುತ್ತನಿಡಿ—ದಣಿಯಲಾರೆ.

**ಸಿದ್ಧಾ:** (ಆವನ ಬಳಿಗೋಡಿ)
ಪೇಳು ತಮ್ಮ,
ಆದುದೇನು?
ಪೇಳು ಚನ್ನ,
ಪೇಳಿದೇನು!

**ಚನ್ನ:** ಬೇಡ ದೊರೆಯೆ—ಅಲ್ಲ ರೀತಿ
ಕೆಟ್ಟ ರೋಗ—ಬರುವ ಭೀತಿ.

ಸಿದ್ಧಾ: ಆರು ತಮ್ಮ, ಏನು ಬೇನೆ,
ಏನು ಬನ್ನ ಸಹಿಪೆ ನೀನೆ!

(ಚನ್ನ ಸನ್ನೆ ಮಾಡುವನು)

ಕುಷ್ಠರೋಗಿ: ಪೋಪೆ ದೊರೆಯೇ, ಮುಟ್ಟ ಬೇಡಿ
ಪೂರ್ವ ಕರ್ಮಫಲದ ನೋಡಿ. (ತೆರಳುವನು)

ಸಿದ್ಧಾ: ಪೇಳು ಚನ್ನ—ಮನುಜನಿವನೆ?
ಏನು ತಾಪ—ಏನು ಬೇನೆ!

ಚನ್ನ: ದೈವ ಚಿತ್ತವ ದೊರೆಯೆ
ತಡೆಯಲಾಪುದೆ—ಸರಿಯು?
ಬದುಕು ಬೇನೆಗಳನ್ನು ವಿಧಿಯ ಬರೆಯೆ!

ಸಿದ್ಧಾ: ನಾನು ಆಪೆನೊ ಇಂತು?

ಚನ್ನ: ವಿಧಿಯು ಮುನಿದರೆ ದೊರೆಯೆ
ನಿನಗು ಬಹುದೀಪರಿಯು!

ಸಿದ್ಧಾ: ವಿಧಿಯು ಮುನಿದರೆ ಚನ್ನ—
ಕಾಂತೆಯಾಪಳೆ ಇಂತು?

ಚನ್ನ: ವಿಧಿಯು ಮುನಿದರೆ, ದೊರೆಯೆ
ಎಲ್ಲರಾಪರು ಇಂತು.

ಸಿದ್ಧಾ: ವಿಧಿಯು ಮುನಿದರೆ, ಚನ್ನ!
ರಾಹುಲನ ಕಾಡುವುದೆ?

ಚನ್ನ: ವಿಧಿಯು ಮುನಿದರೆ ದೊರೆಯೆ
ಎಲ್ಲರಾಪರು ಇಂತು.

ಸಿದ್ಧಾ: ಏನು ಬಾಳಿನ ಭವಣೆ
ಮುಂದೆ ಸಾಗುವ ಚನ್ನ.

(ಸಾಗುವರು. ತಿರುಗಿ ಜನವೃಂದದಲ್ಲಿ)

ಪುರವಣಿಗರು: (ಸ್ವಾಗತಿಸುವರು)

**ಸ್ತ್ರೀಯರು:** (ಆರತಿ ಹಾಡುವರು)

(ಮುಪ್ಪಿನವನೊಬ್ಬನು ಕೂಗುತ್ತ ಬರುವನು)

(ರಾಗ—ಕಾಲಿಂಗಡ)

**ಮುಪ್ಪಿನವ:** ಕರುಣೆಯ ತೋರಿರಿ, ದಾನಿಗಳೆಲ್ಲ
ಮರಣಕೆ ಸನಿಯನ ಪಾಲಿಸಿರೆಲ್ಲ

**ಸಿದ್ಧಾ:** ಏನದು ಚನ್ನ....
ನಾದವೆ ಭಿನ್ನ....

(ಮುಪ್ಪಿನವನು ಸಮೀಪಿಸುವನು)

**ಚನ್ನ:** ಸಾಗುವ ಮುನ್ನ !

**ಸಿದ್ಧಾ:** ಇಲ್ಲವು ಚನ್ನ.
ನಾದವೆ ಭಿನ್ನ.

**ಮುಪ್ಪಿನವ:** ಕರುಣೆಯ ತೋರಿರಿ, ದಾನಿಗಳೆಲ್ಲ
ಮರಣಕೆ ಸನಿಯನ ಪಾಲಿಸಿರೆಲ್ಲ

**ಸಿದ್ಧಾ:** ಏನಿದು ಗೆಳೆಯನೆ
ಪೇಳುವೆಯೇನೆ ?
ಬಾಗಿದ ಜೀವನು
ಸುಕ್ಕಿನ ಸೋನೆ !

**ಚನ್ನ:** ವಯಸಿನ ಚಿಹ್ನೆಯು
ಸೋಜಿಗವೇನೆ ?
ಮುದಿತನವಿಂತೆಯೆ
ಚಿಂತಿಪುದೇನೆ !

**ಸಿದ್ಧಾ:** ನನಗೂ ಬಹುದೇ
ಮುಪ್ಪಿನ ಬೇನೆ ?

**ಚನ್ನ:** ಸೋಜಿಗವೇನೆ ?

ಸಿದ್ಧಾ: ನಿನಗೂ ಬಹುದೇ
ಮುಪ್ಪಿನ ಬೇನೆ ?

ಚನ್ನ: ಸೋಜಿಗವೇನೆ ?

ಸಿದ್ಧಾ: ಕಾಂತೆಗು ಬಹುದೇ
ಮುಪ್ಪಿನ ಬೇನೆ ?

ಚನ್ನ: ಸೋಜಿಗವೇನೆ !

ಸಿದ್ಧಾ: ರಾಹುಲ ಬೆಳೆದರೆ
ಹೀಗಾಗುವನೆ ?

ಚನ್ನ: ಸೋಜಿಗವೇನೆ.

ಸಿದ್ಧಾ: ಯೌವನ ತುಂಬಿರೆ
ಹಿಗ್ಗಿನ್ನೇನೆ ?
ಬದುಕಿಗೆ ಕುಣಿವುದು
ಮರುಳಲ್ಲೇನೆ ! (ಮುಂದುವರಿಯುವರು)

(ಮೂರನೆಯ ಜನರ ಗುಂಪು ಸ್ವಾಗತಿಸುವುದು)

ಸ್ತ್ರೀಯರು: (ಆರತಿ ಹಾಡು)

[ಒಂದು ಕಡೆಯಿಂದ ಶವ ಸಾಗಿಸುವ ಜನರು ಒಂದು ಮೆರವಣಿಗೆಯಾಗಿ ಕಾಣಿಸುವರು.]

(ರಾಗ—ಸಾರಂಗ)

ಸಿದ್ಧಾ: ಬರುತಿಹುದೇನಿದು—ಮೆರವಣಿಗೆ ?
ಏನೀಜನಗಳ ಮೆಲುನಡಿಗೆ !
ಸಾಗಿಪುದೇನದು—ಆವೆಡೆಗೆ ?

ಚನ್ನ: ಏತಕೆ ದೊರೆನೀ ಕಳವಳಿಪೆ ?
ಮೃತನನು ಒಯ್ವರು—ಸುಡುನೆಲಕೆ !

**ಸಿದ್ಧಾ:** ಗೆಳೆಯರ ಸುಡುವರ, ಪೇಳ್ ಚನ್ನ
ಕರುಣೆಯು ಸುಳಿಯದೆ! ತಡೆ ಚನ್ನ!

**ಚನ್ನ:** ಏಂ ದೊರೆಯೆ
ನೀ ಶಿಶುವೆ!
ಶವವನು ಕಾಯುತ ಪೂಜಿಸರುಂಟೆ?
ಕೊಳೆಯುವ ಕಾಯವ—ಇರಿಸುವರುಂಟೆ?
ಸುಡಿತದ ಭೀತಿಯು ಶವಕದು ಉಂಟೆ? (ಸಾಗುವರು)

(ಅವರೆದುರಿಂದಲೇ ಶವವನ್ನು ಸಾಗಿಸುವರು)

**ಸಿದ್ಧಾ:** ಪೇಳ್ ಚನ್ನ
ಪೇಳ್ ಚನ್ನ
ತಿಳಿಯಿಸವೊಂದು ಬದುಕಿನ ಬನ್ನ
ಪೇಳ್ ಚನ್ನ!
ನಾಳೆಗೆ ನಾನೂ ಸಾಯಲು ಬಹುದೆ?

**ಚನ್ನ:** ಸಾವಿಗದೇನು ಕರುಣೆಯಿದೆ!

**ಸಿದ್ಧಾ:** ನಾಳೆಗೆ ನೀನೂ ಸಾಯಲು ಬಹುದ?

**ಚನ್ನ:** ಸಾವಿಗದೇನು ಕರುಣೆಯಿದೆ.

**ಸಿದ್ಧಾ:** ನಾಳೆಗೆ ಕಾಂತೆಯು ಮಡಿಯಲು ಬಹುದೆ?

**ಚನ್ನ:** ಸಾವಿಗದೇನು ಕರುಣೆಯಿದೆ?

**ಸಿದ್ಧಾ:** ರಾಹುಲ ರನ್ನ, ಸಾಯಲು ಬಹುದೇ!

**ಚನ್ನ:** ಸಾವಿಗದೇನು ಕರುಣೆಯಿದೆ!

**ಸಿದ್ಧಾ:** 'ಸಾವಿಗದೇನು ಕರುಣೆಯಿದೆ!'
ಸಾವಿನ ಬಾಯಲಿ ನಾನೂ ನೀನೂ
ತೂಗುತ ನಿಂತಿರೆ—ಸುಖವಿಲ್ಲೇನು!
ಬೇನೆಗೆ, ಮುಪ್ಪಿಗೆ, ಸಾವಿಗೆ ತೊಳಲುವ

ಬಾಳುವೆ ನೆಚ್ಚುವ, ಹುಚ್ಚಿದು ಏನು ?
ಎವೆಯನು ಮುಚ್ಚುತೆ, ರವಿಯನು ಕಾಣದ
ಅಂಧರ ಸಂತೆಗೆ ಬುದ್ಧಿಯೆ—ಏನು !
ಬಾಳನು ಕವಿದಿಹ ಮಬ್ಬನು ಹರಿಯದೆ
ಬಾಳುವ ನರನವ ಆಳಿಹನೇನು ?
ಆಳುವನೇನು ?

**ಚನ್ನ**: ಇರುವುದ ತಬ್ಬುತ
ಇಲ್ಲದ ಮರೆಯುತ
ಬದುಕುವ ಬಗೆಯೇ ಹೆಚ್ಚಿಕೆ, ಜೇನು!
ಇದ್ದರೆ ನಡೆಯುವ
ಬಂದರೆ ಪಡೆಯುವ
ಚಿಂತೆಗೆ ತೂಗಲು ಬರುವುದವೇನು ?

(ತೆರಳುವರು)

## ಆರನೆಯ ದೃಶ್ಯ

[ಅರಮನೆಯಲ್ಲಿ ರಾಹುಲ ಯಶೋಧರೆಯರು ಸಿದ್ಧಾರ್ಥನನ್ನು ಕಾಯುತ್ತಿರುವರು.]

(ರಾಗ—ಜೇಸಾಗ)

**ರಾಹುಲ**: ಏನಾ ಬೇಸರಾ, ಮಾತಾ,
ಪಿತನೊಳು ನುಡಿವೊಡೆ ಮೌನವೆ ಉತ್ತರ.

ಆಟಕೆ ಬಾರನು, ಕೂಟದಿ ಸೇರನು
ಭೇಟದಿ ಬೆರೆಯನು, ಏನಾ ಬೇಸರಾ ?
ನಿನ್ನೊಳು ಮುನಿಸೇ, ನನ್ನೊಳುವಿರಸವೆ !
ಮನೆಯೊಳು ವೈರವೆ—ಬಲುಸೋಜಿಗವೆ !

**ಯಶೋ:** ನಾನೇನೆಂಬೆನೆ ರಾಹುಲಾ,
ರಾಹುಲಾ,
ಮುನಿಸಿನ ಮನವೇನಲ್ಲವು ಬಾಲ,
ಯಾರೊಳು ಮುನಿಸೇನಿಲ್ಲವು ಶೀಲ,
ಪ್ರಜೆಗಳ ಚಿಂತೆಯು
ದೊರೆಗತ್ಯಂತ—ರಾಹುಲ,
ರಾಹುಲ.

**ರಾಹುಲ:** ಅಲ್ಲವು ಅಲ್ಲವು, ಮಾತಾ!

**ಸಿದ್ಧಾ:** (ಪ್ರವೇಶಿಸಿ, ಕುವರನ ಮಾತನ್ನು ಕೇಳಿ)
ಏನಲ್ಲವು ಅಲ್ಲವು ರಾಹುಲ ?

**ಯಶೋ:** ಕೇಳಿಲ್ಲವ ಎಲ್ಲವ, ಆತನ

**ಸಿದ್ಧಾ:** ಏನಲ್ಲವು ಅಲ್ಲವು—ರಾಹುಲ!

**ರಾಹುಲ:** ಏನಿಲ್ಲವು ಇಲ್ಲವು, ನಗುವೇ ನಿನ್ನೊಳು,
ಮೋದವೆ ಕಾಣದು
ನಗುವೇ ಬಾರದು
ಒಲವೇ ನಿಂತುದು
ಗೆಲವೇ ಮೂಡದು
ಏನಾ ಬೇಸರಾ ?

(ಮಗುವನ್ನೆತ್ತಿಕೊಳ್ಳುವನು)

**ಸಿದ್ಧಾ:** ಏನಗೇನಿದೆ ಮಗು ಬೇಸರ,
ತವ ನಲಿವೇ ಮುದದಾಸರಾ.
ದಣಿವಾರಿಪೆ ಕುಲ ಭಾಸ್ಕರಾ,
ಕುಲ ಭಾಸ್ಕರಾ .... .... .... ....

(ಜೋಗುಳ ಹಾಡುತ್ತ ಅವನನ್ನು ಮಲಗಿಸುವನು)

(ರಾಗ—ವಸಂತ ಕಲ್ಯಾಣಿ)

ಕುಲ ಭಾಸ್ಕರಾ
ಕುಲ ಭಾಸ್ಕರಾ
ಕುಲ ಭಾಸ್ಕರಾ, .... ....

ತೇಲುವ ನಾವೆಯ ನಾವೆಲ್ಲ ಸೇರಿ,
ಹಾಡುತ ಪಾಡುತ ನಾಗುವ ದಾರಿ;
ದೂರದ ಪಯಣವು ಬಾ ಹೌಹಾರಿ
ತಾರೆಗಳೆಮಗೆ ದಾರಿಯ ತೋರಿ
ಒಯ್ಯಲು, ಮುಂದಿನ ತಾವನು ಸೇರಿ
ತೊಯ್ಯುತೆ ಸಂತಸ ಸವಿವಾ ಭಾರಿ

ಕುಲ ಭಾಸ್ಕರಾ
ಕುಲ ಭಾಸ್ಕರಾ
ಕುಲ ಭಾಸ್ಕರಾ....

(ಮಗುವನ್ನು ಮಲಗಿಸಿದ ಬಳಿಕ-ಯಶೋಧರೆಯು ಕೆಗಲನ್ನು ಹಿಡಿದು)

ಕನಸುಗಳೆಲ್ಲವ ಹರಿಯುವ ಕಾಂತ !
ಚಿಂತೆಗಳೆಲ್ಲಕೆ ತರುವಾ 'ಅಂತ'

**ಯಶೋ**: ನಗುವನು ತಳಿದರೆ—ಅದುವೆ ಅಂತ
ಬಿಗುವನು ಮರೆತರೆ, ಅದುವೆ ಸ್ವಾಂತ !

(ಇಬ್ಬರೂ ಮಲಗುವರು. ಯಶೋಧರೆಯು ನಿದ್ದೆ ಹೋಗುವಳು)

(ರಾಗ—ಮುಲ್ತಾನಿ)

**ಸಿದ್ಧಾ**: (ತನ್ನಲ್ಲೀ)
ಹೇ ಮನವೇ, ನೀ
ಕದಲ ಬೇಡ,
ನಡುಗ ಬೇಡ !
ಏ ನುಡಿಯೆ, ನೀ

ದುಡುಕ ಬೇಡ,
ಸಿಡುಕ ಬೇಡ!
ಏಂ ಒಡಲೇ ನೀ
ಚದರ ಬೇಡ,
ಬೆದರ ಬೇಡ.

ಚನ್ನ ಬರುವನು ಎಂದೊ !
ನಾಡ ದಾಟಿಸಿ ಹೊರಗೆ ಒಯ್ವನೆಂದೊ !

(ಚನ್ನ ಬರುವನು)

**ಚನ್ನ:** ಬಂದು ಕಾದಿಹೆ ದೊರೆಯೆ !

**ಸಿದ್ಧಾ:** ಬಂದೆಯೇನು?
ಧನ್ಯ ನಾನು ! (ಸತಿ ಸುತರನ್ನು ಸಮೀಪಿಸಿ)

ಕಂದ ಕ್ಷಮಿಸುವುದೆನ್ನ
ಕಾಂತೆ ಕ್ಷಮಿಸುವುದೆನ್ನ
ಮಮತೆ—ಮನ್ನಿಪುದೆನ್ನ (ವಿದಾಯುಗೊಳ್ಳುತ್ತ)

ಮರಳಿ ಬಹೆನೊ,
ತೆರಳಿ ಬಹೆನೊ,
ಜಗದ ದುಗುಡಕೆ ಮದ್ದು
ಕಲಿತು ಬಹೆನೋ (ಇಬ್ಬರೂ ಹೊರಕ್ಕೆ ಬರುವರು)

—೦೦೦—

## ಏಳನೆಯ ದೃಶ್ಯ

(ಸೀಮೆಯ ಕೊನೆಗೆ ಬಂದು, ಕುದುರೆಯಿಂದಿಳಿಯುವರು)

(ರಾಗ--ಭೂಪ)

**ಚನ್ನ:** ಇಲ್ಲಿಗಾಗಿದೆ ನಾಡು,
ಮುಂದೆ ಹಾಸಿದೆ ಕಾಡು,
ಎನಗೆ ಆಣತಿ ನೀಡು

(ಅಳುತ್ತ ಮಣಿಯುವನು)

ಸಿದ್ಧಾ: ಕೇಳಿಗೆ ಆಣತಿಯೆ ?
ಗುಣಕೆ ಆಣತಿಯೆ ?
ಏಕೆ ರೋದಿಪೆ ಚನ್ನ—
ಮೋಸವೆಂಬುವೆ ಬನ್ನ !
ನಾಗುತಿಹ ಎನಗಾಗಿ ಅಳಲು ಬೇಡ !
ತ್ರಿಪಿಸಾಳದ ಇಳಿಮು ನಾನೇಕೆ ಬೇಡಾ ?
ಬಹೆ ನಾನು,
ಬಹೆ ನಾನು.
ಅಂತೆ ಬರಿಲೊಲ್ಲಿನ್ನೈ
ಬಾಳ ಒಡವನು ಬಿಡಿಸಿ—ಬುದ್ಧನಾಗಿ, ಸಿದ್ಧನಾಗಿ.

ಚನ್ನ: ಬಾ ದೇವ, ಬಾ ದೇವ, ಶರಣು ಶರಣು.

---

## ಕೊನೆಯ ನೋಟ

[ಬೋಧಿ ವೃಕ್ಷದಾಸರದಲ್ಲಿ ಪ್ರಜ್ಞೆ ತಿಳಿದು ಬೆಳಗುತ್ತಿರುವ ಬುದ್ಧ ಮೂರ್ತಿ]

ಜನ: ಶುಭೋದಯವಾಗುತಿದೆ ಯುಗದ
ಸತ್ಯೋದಯವಾಗುತಿದೆ ಜನದ
ಪ್ರಜ್ಞೋದಯವಾಗುತಿದೆ ಮನದ
ಬುದ್ಧೋದಯವಾಗುತಿದೆ—ಜಗದ

ಬುದ್ಧ: ನವ ಪ್ರೇಮ ರಾಜ್ಯದಲಿ, (ರಾಗ—ಝಿಂಬವತಿ)
ನಲಿವ ಜನ, ಜೀವಿಗಳೆ,
ಬಾಳ ನೌಕೆಯ ನೇರಿ,
ಭವದ ಕಡಲನು ದಾಂಟಿ—
ಮೋಹವಿಲ್ಲದೆ ಚಲಿಪ ಗಮನ ಬೇಕು,
ಎದೆಯ ಹಾಯನು ಬಿತ್ತರಿಸಬೇಕು,
ಹಿಂಸೆಯಾ ಬಂಡೆಗಳ ತೊರೆಯ ಬೇಕು,
ಸತ್ಯವೆಂಬುವ ತಡಿಯ ಕಾಣಬೇಕು!

—o—o—